ಉಪನ್ಯಾಸ
ಗ್ರಂಥಮಾಲೆ

೧೪೨

# ನವೋದಿತ ಬಂಗ್ಲಾದೇಶ

ಡಾ॥ ಎ. ಎಂ. ರಾಜಶೇಖರಯ್ಯ,
ಎಂ.ಎ., ಪಿಎಚ್. ಡಿ




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಮಾರ್ಚ ೧೯೭೨

ಉಪನ್ಯಾಸ ಗ್ರಂಥಮಾಲೆ

೧೪೨

# ನವೋದಿತ ಬಂಗ್ಲಾದೇಶ

ಡಾ॥ ಎ. ಎಂ. ರಾಜಶೇಖರಯ್ಯ, ಎಂ. ಎ., ಪಿಎಚ್. ಡಿ.

ರೀಡರ್, ರಾಜ್ಯಶಾಸ್ತ್ರ ವಿಭಾಗ,

ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-೩.




ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಮಾರ್ಚ ೧೯೭೨

ಪ್ರಕಾಶಕರು :

**ಶ್ರೀ ಎಸ್. ಎಸ್. ಒಡೆಯರ,** ಎಂ. ಎ., ಎಲ್‌ಎಲ್. ಬಿ.

ಕುಲಸಚಿವರು

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಪ್ರಥಮ ಮುದ್ರಣ : ಮಾರ್ಚ್, ೧೯೭೨

೫,೦೦೦ ಪ್ರತಿಗಳು



ಬೆಲೆ : **೨೫ ಪೈಸೆ**

ಮುದ್ರಕರು :

**ಪಂ. ನಾಗಭೂಷಣಶಾಸ್ತ್ರಿಗಳು,**

ಮಹಾಂತ ಮುದ್ರಣಾಲಯ, ಧಾರವಾಡ–೬

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತಸಾಗಿರುವುದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೧೪೧ ಪುಸ್ತಕಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಮೂರು-ನಾಲ್ಕು ಮುದ್ರಣಗಳನ್ನೂ ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯು ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧೦–೩–೧೯೭೨

ಎ. ಎಸ್. ಅಡಕೆ
ಕುಲಪತಿ

# ನಿವೇದನೆ

ಏಪ್ರಿಲ್ ೧೭, ೧೯೭೧ ರಂದು ಅಂದಿನ ಪೂರ್ವಪಾಕಿಸ್ತಾನದ ಕುಷ್ಟಿಯಾ ಜಿಲ್ಲೆಯ ಒಂದು ಕಡೆ ಮಾವಿನ ತೋಪಿನಲ್ಲಿ ಅತ್ಯಂತ ಸರಳ ಹಾಗೂ ಗಂಭೀರ ಸಮಾರಂಭವೊಂದು ಜರುಗಿತು. ಆ ಸಮಾರಂಭದಲ್ಲಿ ಪೂರ್ವಬಂಗಾಲದ ನಾಯಕರೊಬ್ಬರಿಂದ 'ಬಂಗ್ಲಾದೇಶ'ದ ಹಸಿರು–ಕೆಂಪು–ಸುವರ್ಣದ ನೂತನ ರಾಷ್ಟ್ರ ಧ್ವಜಾರೋಹಣವಾಗಿ ಕವಿ ರವೀಂದ್ರರ ಗೀತೆಯನ್ನು ರಾಷ್ಟ್ರ ಗೀತೆಯಾಗಿ ಹಾಡಲಾಯಿತು. ಹರಕು ಮುರುಕು ಸಮವಸ್ತ್ರ ಮತ್ತು ಆಯುಧಗಳನ್ನು ಧರಿಸಿದ್ದ, ರಕ್ಷಣಾ ಪಡೆಯ ಒಂದು ಭಾಗವೆಂದು ಹೇಳಲಾದ ಸ್ವಯಂ ಸೇವಕ ಸೈನಿಕ ತುಕಡಿಯೊಂದು ಗೌರವ ವಂದನೆಯನ್ನು ಸಲ್ಲಿಸಿತು. ವಂಗ ಬಂಧು ಶೇಖಮುಜೀ–ಬುರ್ ರಹಮಾನರು ಪಶ್ಚಿಮ ಪಾಕಿಸ್ತಾನದ ಜೈಲೊಂದರಲ್ಲಿ ಬಂಧಿತರಾಗಿದ್ದರಿಂದ ಅವರು ಈ ಸಮಾರಂಭದಲ್ಲಿರಲಿಲ್ಲ.ಆದರೂ ಅವರೇ ಸ್ವತಂತ್ರ ಬಂಗ್ಲಾ ದೇಶದ ಪ್ರಥಮ ರಾಷ್ಟ್ರಾಧ್ಯಕ್ಷರೆಂದು ನಿಯುಕ್ತರಾದರು. ಅವರು ಬರುವವರೆಗೂ ಸೈಯದ್ ನಸರುಲ್ ಇಸ್ಲಾಮರವರು ತಾತ್ಪೂರ್ತಿಕ ಅಧ್ಯಕ್ಷರಾಗಿ ಪ್ರಮಾಣ ವಚನ ಸ್ವೀಕರಿಸಿದರು. ಸ್ವತಂತ್ರ ಬಂಗ್ಲಾದೇಶದ ಪ್ರಥಮ ಸಂಪುಟದ ಸಚಿವರು ಪ್ರಮಾಣ ವಚನ ಸ್ವೀಕರಿಸಿದರು. ಈ ಗಂಭೀರ ವಾತಾವರಣದಲ್ಲಿ ಬಂಗ್ಲಾದೇಶದ ಉದಯವಾಯಿತು. ಇದನ್ನು

ವೀಕ್ಷಿಸಿದ ಭಯಗ್ರಸ್ತ ಬಂಗಾಲಿ ಆಬಾಲವೃದ್ಧರಲ್ಲಿ ಯಾವುದೋ ಒಂದು ಹೊಸ ಚೇತನವುಂಟಾಗಿ ಅವರಲ್ಲಿ ನವ ಮನ್ವಂತರ ವೊಂದರ ಆಶೆ ಅಂಕುರಿಸಿತು. ಅವರೆಲ್ಲರೂ ಸ್ಫೂರ್ತಿಯಿಂದ "ಜೊಯ್ ಬಂಗ್ಲಾ","ಮುಜೀಬುರ್ ರಹಮಾನ್ ಜಿಂದಾಬಾದ್" ಎಂಬ ಘೋಷಣೆಮಾಡುತ್ತಾ ಅಲ್ಲಿಂದ ಚದುರಿದರು.

ಆದರೆ. ಇದು ಅವರ ಹೋರಾಟದ ಕೊನೆಯಾಗಿರದೆ ಒಂಭತ್ತು ತಿಂಗಳ ಅವಿರತ ಹೋರಾಟಕ್ಕೆ ನಾಂದಿಯಾಯಿತು. ಬಂಗ್ಲಾ ಸ್ವಾತಂತ್ರ್ಯ ಸಮರದ ಘಟನೆಗಳನ್ನು, ಅವುಗಳ ಹಿನ್ನೆಲೆ ಪರಿಣಾಮಗಳನ್ನು ಈ ಕಿರುಹೊತ್ತಿಗೆಯಲ್ಲಿ ವಿವರಿಸುವ ಪ್ರಯತ್ನ ಮಾಡಿದ್ದೇನೆ. ನವೋದಿತ ಬಂಗ್ಲಾದೇಶದೊಡನೆಯೇ ಉದಿತವಾಗಿರುವ ಸಮಸ್ಯೆಗಳನ್ನು ಮತ್ತು ಅವುಗಳಲ್ಲಿ ಭಾರತದ ಪಾತ್ರವನ್ನು ಇಲ್ಲಿ ವಿವೇಚಿಸಲಾಗಿದೆ. ಓದುಗರಿಗೆ ಈ ಸಮ ಸ್ಯೆಯ ಆಮೂಲಾಗ್ರ ಪರಿಚಯ ಮಾಡಿಕೊಡುವುದು ಈ ಕಿರು ಹೊತ್ತಿಗೆಯ ಸಾಹಸಕ್ಕೆ ಮೀರಿದ ಕೆಲಸವೆನಿಸಿದರೂ ಸಾಕಷ್ಟು ಅಂಕಿ ಅಂಶಗಳ ಸಹಾಯದಿಂದ ಆದಷ್ಟು ಶಾಸ್ತ್ರೀಯ ದೃಷ್ಟಿ ಯಿಂದ ಈ ಸಮಸ್ಯೆಯನ್ನು ಪರಿಶೀಲಿಸುವ ಪ್ರಥಮ ಪ್ರಯತ್ನ ಮಾಡಿರುತ್ತೇನೆ.

ದಿನಾಂಕ ೧೨-೧-೧೯೭೨ರಂದು ಕಾರವಾರ ಜಿಲ್ಹೆಯ ಸಾಣಿ ಕಟ್ಟಾ ಗ್ರಾಮದ ಶ್ರೀ ನಿತ್ಯಾನಂದ ಪ್ರೌಢ ಶಾಲೆಯ ಆವರಣದಲ್ಲಿ ಜರುಗಿದ ಕರ್ನಾಟಕ ವಿಶ್ವವಿದ್ಯಾಲಯದ ೧೫೪ ನೇ ವ್ಯಾಸಂಗ ವಿಸ್ತರಣ ಉಪನ್ಯಾಸ ಶಿಬಿರದಲ್ಲಿ ನಾನು ಮಾಡಿದ ಭಾಷಣದ ವಿಸ್ತೃತರೂಪವೇ ಈ ಕಿರುಹೊತ್ತಿಗೆ. ನನ್ನ ಭಾಷಣವನ್ನು ಸ್ವಾಗ

ತ್ರಿಸಿದ ಸಾಣಿಕಟ್ಟೆಯ ಸಭಿಕರಿಗೂ, ಇಡೀ ವಿಶ್ವದ ಗಮನವನ್ನೇ ಸೆಳೆದಂತಹ ಪ್ರಚಲಿತ ವಿಷಯದ ಮೇಲೆ ಭಾಷಣಮಾಡಲು ಅವಕಾಶಮಾಡಿಕೊಟ್ಟು ಅದನ್ನು ಈಗ ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿರುವುದಕ್ಕಾಗಿ ಕರ್ನಾಟಕ ವಿಶ್ವವಿದ್ಯಾಲಯದ ಅಧಿಕಾರ ವರ್ಗದವರಿಗೂ ನನ್ನ ಕೃತಜ್ಞತೆಗಳು. ಮತ್ತು ಸಾಣಿಕಟ್ಟೆಯ ಕಾರ್ಯಕ್ರಮದ ಯಶಸ್ಸಿಗೆ ಅವಿರತವಾಗಿ ಶ್ರಮಿಸಿದ ನಿತ್ಯಾನಂದ ಹೈಸ್ಕೂಲಿನ ಮುಖ್ಯಾಧ್ಯಾಪಕ ಶ್ರೀ ಗೋಪಾಲಕೃಷ್ಣ ನಾಯಕ ಹಾಗೂ ಇತರ ಎಲ್ಲರಿಗೂ ಉಪಕೃತನಾಗಿದ್ದೇನೆ.

೧-೩-೧೯೭೨ **ಎ. ಎಂ. ರಾಜಶೇಖರಯ್ಯ**

ಕಲ್ಯಾಣನಗರ

ಧಾರವಾಡ-೭

# ಪರಿವಿಡಿ





# ೧

# ಕರಾಳ ರಾತ್ರಿ

ಭಾರತ ಉಪಖಂಡದ ಇತಿಹಾಸದಲ್ಲಿ ೧೯೭೧ ನೇ ವರ್ಷವು ಮಹತ್ವಪೂರ್ಣವಾದ ವರ್ಷವಾಗಿದೆ. ಇದು ಸುಮಾರು ಏಳೂವರೆ ಕೋಟಿ ಜನರ ಭವಿತವ್ಯವನ್ನು ಅಂತಿಮವಾಗಿ ನಿರ್ಧರಿಸಿದ ವರ್ಷವಾಗಿದೆ. ವರ್ಷದಾರಂಭದಲ್ಲಿ ಪಾಕಿಸ್ತಾನದಾದ್ಯಂತ ೧೯೭೦ ನೆಯ ಡಿಸೆಂಬರ ತಿಂಗಳಲ್ಲಿ ಜರುಗಿದ ಚುನಾವಣೆಗಳನ್ವಯ ಮಿಲಿಟರಿ ಆಡಳಿತ ಕೊನೆಗೊಂಡು ಜನತಾ ಸರಕಾರ ಸ್ಥಾಪನೆಯಾಗುವದೆಂಬ ಆಶೆ ಅಂಕುರಿಸಿದ್ದಿತು. ಜನರಲ್ ಯಾಹ್ಯಾಖಾನರು ತಾವೇ ನಡೆಸಿದ ಚುನಾವಣೆಗಳ ಫಲಿತಾಂಶವನ್ನು ಮನ್ನಿಸಿ ತಮ್ಮ ಆಶ್ವಾಸನದಂತೆ ಪಾಕಿಸ್ತಾನದ ಜನತಾ ಪ್ರತಿನಿಧಿಗಳಿಗೆ ಅಧಿಕಾರ ಹಸ್ತಾಂತರವನ್ನು ಮಾಡುವರೆಂದು ನಿರೀಕ್ಷಿಸಲಾಗಿತ್ತು. ಮಾರ್ಚ ಎರಡರಂದು ರಾಷ್ಟ್ರೀಯ ಅಸೆಂಬ್ಲಿಯ ಅಧಿವೇಶನವು ಸೇರುವದೆಂದೂ ಸಾರಲಾಗಿತ್ತು. ಆದರೆ ಜನತೆಗೆ ಮಾತ್ರ ನಿರಾಶೆ ಕಾದಿತ್ತು. ಯಾವುದಾದರೂ ಒಂದು ನೆಪವನ್ನು ಮುಂದೊಡ್ಡಿ ತಮ್ಮ ಸರ್ವಾಧಿಕಾರ ಸ್ಥಾನವನ್ನು ಉಳಿಸಿಕೊಳ್ಳಬೇಕೆಂಬ ದುರಾಸೆಯಿಂದ ಯಾಹ್ಯಾಖಾನರು ಅಸೆಂಬ್ಲಿ ಅಧಿವೇಶನವನ್ನು ಮುಂದೆ ಹಾಕಿರುವದಾಗಿ ಘೋಷಿಸಿದರು. ಪಶ್ಚಿಮ ಪಾಕಿಸ್ತಾನ ಮತ್ತು ಪೂರ್ವ ಪಾಕಿಸ್ತಾನದ ನಾಯಕರು ಹಾಗೂ ಜನತೆಯಲ್ಲಿ ಭಿನ್ನಾಭಿಪ್ರಾಯವಿರುವ ಅಂಶವನ್ನು ಜ॥ ಯಾಹ್ಯಾಖಾನರು

ಮುಂದುಮಾಡಿ ಪಶ್ಚಿಮ ಪಾಕಿಸ್ತಾನದ "ಜನತಾ ಪ್ರಗತಿಪರ ಪಕ್ಷ"ದ ನಾಯಕ ಝುಲಫಿಕರ್‌ಆಲಿ ಭುಟ್ಟೋರವರು ಪೂರ್ವ ಪಾಕಿಸ್ತಾನದ ಸ್ವಾಯತ್ತತೆಯ ಬೇಡಿಕೆಯನ್ನು ಮಾನ್ಯಮಾಡಲು ಸಿದ್ಧರಿಲ್ಲದಿರುವದರಿಂದ ಭಿನ್ನಾಭಿಪ್ರಾಯವನ್ನು ಸರಿಪಡಿಸದೆ ಅಧಿಕಾರ ಹಸ್ತಾಂತರವನ್ನು ಮಾಡಲಾಗುವದಿಲ್ಲವೆಂದು ಸಾರಿದರು. ಈ ಭಿನ್ನಾಭಿಪ್ರಾಯವನ್ನು ನಿವಾರಿಸುವ ದಿಶೆಯಲ್ಲಿ ತಾವು ಪ್ರಯತ್ನಿಸುವದಾಗಿ ಹೇಳಿ ಭುಟ್ಟೋರವರೊಡನೆ ಡಾಕಾಕ್ಕೆ ಮಾರ್ಚ ೨೩ ರಂದು ಪ್ರಯಾಣ ಮಾಡಿದರು. ಪೂರ್ವ ಪಾಕಿಸ್ತಾನದ ನೆಚ್ಚಿನ ಜನತಾ ನಾಯಕ ಶೇಖ ಮುಜೀಬುರ್ ರಹಮಾನರೊಡನೆ ಮಾತುಕತೆಗಳನ್ನು ನಡೆಸಲಾಯಿತು. ಈ ಮಾತುಕತೆಗಳ ನೆಪದಲ್ಲಿ ಜ॥ ಯಾಹ್ಯಾಖಾನರು ತಮ್ಮ ಮಿಲಿಟರಿ ದಬ್ಬಾಳಿಕೆಯನ್ನು ನಡೆಸುವ ಸಿದ್ಧತೆಯಲ್ಲಿದ್ದರೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಮಾರ್ಚ ತಿಂಗಳ ೨೫ ಮತ್ತು ೨೬ ನೆ ದಿನಾಂಕದ ಮಧ್ಯರಾತ್ರಿಯ ಹೊತ್ತಿಗೆ ಇದ್ದಕ್ಕಿದ್ದಂತೆ ಪಶ್ಚಿಮ ಪಾಕಿಸ್ತಾನದ ಸೈನಿಕರು ಜನಪ್ರಿಯ ನಾಯಕ ಮುಜಿಬುರ್ ರಹಮಾನರ ನಿವಾಸವನ್ನು ಸುತ್ತುಗಟ್ಟಿ ಗುಂಡಿನ ಮಳೆಗರೆದರು. ಈ ಅನಿರೀಕ್ಷಿತ ಘಟನೆಯಿಂದ ವಿಚಲಿತರಾಗದ ಶೇಖ್ ಮುಜೀಬುರರು "ಬೇಕಾದರೆ ನನ್ನನ್ನು ದಸ್ತಗಿರಿ ಮಾಡಿರಿ, ಆದರೆ ನನ್ನ ಹೆಂಡತಿ ಮಕ್ಕಳನ್ನು ಕೊಲ್ಲದಿರಿ" ಎಂದು ಗುಡುಗಿದರು. ಆಗ ಗುಂಡಿನ ಮಳೆಗರೆಯುವದನ್ನು ನಿಲ್ಲಿಸಿದ ಪಾಕ್ ಸೈನಿಕರು ಮುಜಿಬುರ್ ರಹಮಾನರನ್ನು ತಮ್ಮ ವಶಕ್ಕೆ ತೆಗೆದುಕೊಂಡು ಹೋದರು. ತನ್ನ ನಾಯಕನನ್ನು ಕಳೆದುಕೊಂಡ ಜೀವಾವರೆ

ಕೋಟಿ ಬಂಗಾಲಿಗಳಿಗೆ ಅದು ಕರಾಳ ರಾತ್ರಿಯಾಯಿತು. ಮರುದಿನ ಸೂರ್ಯೋದಯವಾಗುವದರೊಳಗಾಗಿ ಪೂರ್ವ ಬಂಗಾಲದಾದ್ಯಂತ ಸುಮಾರು ೫೦,೦೦೦ ಜನರನ್ನು ಪಶ್ಚಿಮ ಪಾಕಿಸ್ತಾನದ ಸೈನಿಕರು ಕೊಲೆ ಮಾಡಿದರೆಂದರೆ ಎಂತಹ ಕ್ರೂರ ಹೃದಯಿಯೂ ಕೂಡ ನಡುಗದಿರಲಾರ. ೪೮ ತಾಸುಗಳ ಅವಧಿಯಲ್ಲಿ ೩೦,೦೦,೦೦೦ ಜನರು ಜ॥ ಟಿಕ್ಕಾಖಾನನ ಮಿಲಿಟರಿ ಯಂತ್ರಕ್ಕೆ ತುತ್ತಾಗಿ ಅಸು ನೀಗಿದರೆಂದು ಇನ್ನೊಂದು ಅಂದಾಜು ಮಾಡಲಾಗಿದೆ. ಕೇವಲ ಒಂದು ಅರ್ಧರಾತ್ರಿಯ ಅವಧಿಯಲ್ಲಿ ಯಾಹ್ಯಾಖಾನರ ಹಸ್ತಕ ಜ॥ ಟಿಕ್ಕಾಖಾನನ ನೇತೃತ್ವದಲ್ಲಿ ಪಶ್ಚಿಮ ಪಾಕಿಸ್ತಾನಿ ಸೈನಿಕರು ಜರುಗಿಸಿದ ಹತ್ಯಾಕಾಂಡ ಇಡೀ ಮಾನವ ಕುಲದ ಇತಿಹಾಸದಲ್ಲಿ ಎಂದೂ ಜರುಗದಂತಹ ಕರಾಳ ಘಟನೆಯಾಗಿದೆ. ಯಾವುದಾದರೂ ಒಂದು ಪ್ರದೇಶದಲ್ಲಿ ಅಣು ಬಾಂಬನ್ನು ಹಾಕಿದರೂ ಕೂಡ ಇಂತಹ ಹತ್ಯಾಕಾಂಡ ಹಾಗೂ ವಿನಾಶ ಉಂಟಾಗಲು ಸಾಧ್ಯವಿಲ್ಲ. ಬಂಗಾಲಿಗಳನ್ನು ನಿರ್ನಾಮ ಮಾಡಲೆಂದೇ ಯಾಹ್ಯಾಖಾನರು ಅಂದು ರಾತ್ರಿ ಡಾಕಾದಿಂದ ಕರಾಚಿಗೆ ವಾಪಸಾದ ಕೂಡಲೇ "ಅವರನ್ನೆಲ್ಲಾ ಮುಗಿಸಿಬಿಡಿರಿ" ಎಂದು ಆಜ್ಞಾಪಿಸಿರಬೇಕು. ಇಲ್ಲವಾದಲ್ಲಿ ಕಂಡ ಕಂಡವರನ್ನು ಗುಂಡಿಕ್ಕಿ ಕೊಂದು, ಬಂಗಾಲಿಗಳ ಮಕ್ಕಳನ್ನು ಇಬ್ಭಾಗವಾಗಿ ಸೀಳಿ ಎಸೆದು, ಹೆಣ್ಣುಮಕ್ಕಳ ಮೇಲೆ ಅಮಾನುಷ ರೀತಿಯಲ್ಲಿ ಅಪಚಾರ ಮಾಡಿ ಕೊಂದದ್ದು ಒಂದು, ಎರಡು ದಿನವಲ್ಲ ಇಡೀ ಒಂಬತ್ತು ತಿಂಗಳುಗಳ ಕಾಲ ಕೊಲೆ, ಲೂಟಿ, ಸುಲಿಗೆ ಅಷ್ಟೇ! ಏಕೆ ಸರ್ವನಾಶಗೈಯುವ ಕಾರ್ಯಾಚರಣೆಯ ಅರ್ಥವಾದರೂ

ಏನು? ಉದ್ದೇಶವಾದರೂ ಏನು? ಇಪ್ಪತ್ತನೆಯ ಶತಮಾನದ ರಕ್ತ ಪಿಪಾಸಿ ಹಾಗೂ ಮನುಕುಲ ವಿನಾಶಕನೆಂದು ಕುಪ್ರಸಿದ್ಧನಾಗಿರುವ ಜರ್ಮನ ನಾಝಿ ನಾಯಕ ಅಡಾಲ್ಫ ಹಿಟ್ಲರ್ ಇಂದೇನಾದರೂ ಬದುಕಿದ್ದರೆ ಜ॥ ಯಾಹ್ಯಾಖಾನರು ಜರುಗಿಸಿದ ನರಮೇಧವನ್ನು ಕಂಡು ನಾಚಿಕೆಯಿಂದ ತಲೆ ತಗ್ಗಿಸುತ್ತಿದ್ದನೇನೋ! ಯಹೂದಿಯರನ್ನು ನಿರ್ಮೂಲ ಮಾಡಿ ಇಡೀ ಜಗತ್ತನ್ನು ಗೆದ್ದು ಜರ್ಮನಿಯ ಆಧಿಪತ್ಯವನ್ನು ಸ್ಥಾಪಿಸಬೇಕೆಂಬ ಹಿಟ್ಲರನ ದುರಭಿಮಾನದ ಆಕಾಂಕ್ಷೆಯು ಮಣ್ಣುಪಾಲಾಯಿತು. ಲಕ್ಷಾಂತರ ಜನರು ಅಸು ನೀಗಿದರಲ್ಲದೇ ಇಡೀ ಜರ್ಮನ್ ದೇಶವು ನಾಚಿಕೆಯಿಂದ ತಲೆ ತಗ್ಗಿಸಬೇಕಾಯಿತು. ತಮ್ಮ ನಾಯಕನ ದುಷ್ಕೃತ್ಯಗಳಿಗಾಗಿ ಸೋತ ಜರ್ಮನ್ ದೇಶ ದೊಡ್ಡ ಬೆಲೆಯನ್ನು ತೆತ್ತಿತು. ಇದೇ ರೀತಿ ಪಾಕಿಸ್ತಾನದ ಆಳರಸರು ತಮ್ಮ ದಮನ ನೀತಿಯನ್ನು ಪೂರ್ವ ಪಾಕಿಸ್ತಾನದಲ್ಲಿ ನಡೆಸಿದ ಫಲವಾಗಿ ಇಂದು ಪಾಕಿಸ್ತಾನವು ಒಡೆದು ಚೂರಾಗಿದೆ. ಅವರು ತಮ್ಮ ಅಮಾನುಷ ಕೃತ್ಯಗಳಿಗೆ ದೊಡ್ಡ ಬೆಲೆಯನ್ನು ತೆತ್ತಿರುತ್ತಾರೆ. ಇಡೀ ಪಾಕಿಸ್ತಾನದ ಬೆನ್ನೆಲುಬಾಗಿದ್ದ ಸುಪದ್ಭರಿತ ಪೂರ್ವ ಪಾಕಿಸ್ತಾನವನ್ನೇ ಕಳೆದುಕೊಳ್ಳಬೇಕಾಯಿತು.

ಈ ಒಂಬತ್ತು ತಿಂಗಳುಗಳ ಅವಧಿಯಲ್ಲಿ ಒಟ್ಟು ಒಂದು ಕೋಟಿ ಬಂಗಾಲಿಗಳು ನರಹತ್ಯೆಯಿಂದ ಪಾರಾಗಲು ಬೇರಾವ ಉಪಾಯವನ್ನು ಕಾಣದೆ ನೆರೆ ರಾಷ್ಟ್ರವಾದ ಭಾರತಕ್ಕೆ ನಿರಾಶ್ರಿತರಾಗಿ ಬಂದರು. ತಮ್ಮ ಮನೆ-ಮಠ, ಆಸ್ತಿ-ಪಾಸ್ತಿ, ಬಂಧು-ಬಳಗ ಎಲ್ಲವನ್ನು ತೊರೆದು, ಭಾರತದೊಳಗೆ ಪ್ರವೇಶಿಸಿ ನಿರಾಶ್ರಿ

ತರ ಶಿಬಿರಗಳಲ್ಲಿ ಆಶ್ರಯ ಪಡೆದರು. ಪಶ್ಚಿಮ ಪಾಕಿಸ್ತಾನಿ ಸೈನಿಕರ ಅಮಾನುಷ ಕೃತ್ಯಗಳಿಗೆ ಬಲಿಯಾಗಿ ಪ್ರಾಣತೆತ್ತ ಆಬಾಲವೃದ್ಧ, ಸ್ತ್ರೀ-ಪುರುಷ, ಮುಸ್ಲಿಂ, ಹಿಂದು, ಕ್ರಿಶ್ಚಿಯನ್ ಮುಂತಾದ ಬಂಗಾಲಿಯವರ ಸಂಖ್ಯೆ ಇಷ್ಟೇ ಎಂದು ಹೇಳುವದು ಕಷ್ಟವಾದರೂ ಬಂಗ್ಲಾದೇಶದ ಪ್ರಥಮ ರಾಷ್ಟ್ರಾಧ್ಯಕ್ಷ ಹಾಗೂ ಈಗಿನ ಪ್ರಧಾನಿ ಮುಜಿಬುರ್ ರಹಮಾನರು ಹೇಳಿರುವಂತೆ ಸುಮಾರು ೩೦ ಲಕ್ಷ ಜನರು ಕೊಲ್ಲಲ್ಪಟ್ಟಿರುತ್ತಾರೆ. ಅವರ ಪಕ್ಷವಾದ ಅವಾಮಿ ಲೀಗಿನ ಕಾರ್ಯಾಲಯಗಳು ಬಂಗ್ಲಾ ದೇಶದ ಎಲ್ಲಿ ಭಾಗಗಳಲ್ಲಿಯೂ ಇದ್ದು ಅವುಗಳಿಂದ ದೊರೆತ ವರದಿಗಳ ಆಧಾರದ ಮೇಲೆ ಇಷ್ಟು ಜನರು ಕೊಲ್ಲಲ್ಪಟ್ಟಿದ್ದಾರೆಂದು ನಿರ್ಧರಿಸಲಾಗಿದೆ. ಇವರಲ್ಲಿ ಮುಖ್ಯವಾಗಿ ಸುಮಾರು ಒಂದು ಸಾವಿರ ಬುದ್ಧಿಜೀವಿಗಳನ್ನು ಆರಿಸಿ ಹುಡುಕಿ ಹಿಡಿದು ಕೊಲ್ಲಲಾಯಿತು. ಇವರಲ್ಲಿ ಪ್ರೊಫೆಸರರು, ಡಾಕ್ಟರರು, ಎಂಜಿನೀಯರರು, ಕವಿಗಳು, ಬರಹಗಾರರು ಪ್ರಮುಖರಾದವರು. ಡಾಕಾದ ಪ್ರಸಿದ್ಧ ಹೃದಯತಜ್ಞ ಡಾಕ್ಟರರೊಬ್ಬರನ್ನು ಹಿಡಿದು ಕೊಂದದ್ದಲ್ಲದೇ ಅವರ ಹೃದಯವನ್ನೇ ಇರಿದು ಹೊರಗೆ ತೆಗೆಯಲಾಯಿತು. ಇದೆಂತಹ ಅಮಾನುಷ ಕೃತ್ಯ !! ಮನುಷ್ಯತ್ವದ ಎಲ್ಲೆಯನ್ನು ಮೀರಿ ಆ ತಜ್ಞನು ಹೃದಯ ಚಿಕಿತ್ಸಕನಾಗಿದ್ದುದರಿಂದ ಅವನ ಹೃದಯವನ್ನೆ ಹೊರಗೆ ತೆಗೆದು ಅಪಹಾಸ್ಯಮಾಡುತಿತ್ತು ಆ ದೃಶ್ಯ !!! ಇಂತಹ ಅಮಾನುಷ ಅತ್ಯಾಚಾರಗಳು ಒಂದೇ, ಎರಡೇ ? ಸಾವಿರಾರು ದಾರುಣ ಕತೆಗಳು ಬೆಳಕಿಗೆ ಬರುತ್ತಿವೆ. ಬಂಗಾಲಿಗಳ ಸಂತತಿಯನ್ನೇ ಬೆಳೆಯಗೊಡಬಾರದೆಂಬ ಭ್ರಮೆ

ಯಿಂದ ಪಶ್ಚಿಮ ಪಾಕಿಸ್ತಾನಿ ಸೈನಿಕರು ಗರ್ಭಿಣಿ ಸ್ತ್ರೀಯರನ್ನು ಹಿಡಿದು ಗರ್ಭವನ್ನು ಬಾದೂಕಿನ ಭರ್ಚಿಯಿಂದ ಚುಚ್ಚಿ ತೆರೆದು ಭ್ರೂಣವನ್ನು ನಾಶಮಾಡಿದ ವರದಿಗಳನ್ನು ಓದಿದರೆ ಯಾರಿಗಾದರೂ ದಿಗ್ಭ್ರಮೆಯಾಗದಿರದು. ಪಶ್ಚಿಮ ಪಾಕಿಸ್ತಾನಿ ಸೈನಿಕರ ಕಾಮದಾಹವನ್ನು ಇಂಗಿಸಲು ಬಂಗಾಲಿ ಸ್ತ್ರೀಯರ ಮಾನಾಪಹರಣವಾಯಿತಲ್ಲದೆ ಪ್ರಾಣಾಪಹರಣವೂ ಆಯಿತು. ತಾಯಿ ತಂದೆಯರ ಕಣ್ಣೆದುರಿನಲ್ಲಿಯೇ ಅವರ ಹೆಣ್ಣುಮಕ್ಕಳ ಮೇಲೆ-ಅತ್ಯಾಚಾರವನ್ನೆಸಗಲಾಯಿತು. ಮಕ್ಕಳ ಎದುರಿನಲ್ಲಿ ತಾಯಂದಿರ ಮೇಲೆ ಅತ್ಯಾಚಾರ !! ಇವೆಲ್ಲವನ್ನು ವಿವರಿಸುವಾಗ ಶೇಕ್ ಮುಜಿಬುರ್ ರಹಮಾನರ ಕಣ್ಣಿನಲ್ಲಿ ನೀರಿನ ಕೋಡಿ ಹರಿಯಿತು. ಪಾಕ್ ಸೈನಿಕರು, ತಮ್ಮನ್ನು ವಿರೋಧಿಸಿದವರನ್ನು ದಿನಗಟ್ಟಲೆ ಚಿತ್ರಹಿಂಸೆಗೆ ಗುರಿಮಾಡಿ ಕೊಂದರು. ಇಂದು ಬಾಂಗ್ಲಾದೇಶದ ಹೊಲಗದ್ದೆಗಳೂ, ನದಿಗಳ ದಡಗಳೂ, ನಾಶಗೊಂಡ ಮನೆಗಳು ವಧೆಯಾದ ಬಂಗಾಲಿಗಳ ಎಲುಬುಗಳು ತಲೆಬುರುಡೆಗಳಿಂದ ತುಂಬಿವೆ.

ಇಂತಹ ಬೃಹತ್‌ಪ್ರಮಾಣದಲ್ಲಿ ನಡೆದ ಅತ್ಯಾಚಾರ, ಅಮಾನುಷ ಕಗ್ಗೊಲೆಯನ್ನು ನೋಡಿ ಇಡೀ ಮಾನವ ಕುಲವೇ ನಾಚಿಕೆಯಿಂದ ತಲೆತಗ್ಗಿಸಬೇಕಾಗಿದೆ. ಇಷ್ಟೆಲ್ಲಾ ನಡೆದುದು ಕೇವಲ ಕೆಲವೇ ಜನರ ಮಿಲಿಟರಿ ನಾಯಕರ ಅಧಿಕಾರ ದಾಹವನ್ನು ನೀಗಿಸುವದಕ್ಕಾಗಿ ಎಂದರೆ ಯಾರು ಆಶ್ಚರ್ಯಗೊಳ್ಳದಿರಲಾರರು ? ಇಪ್ಪತ್ತನೆಯ ಶತಮಾನವು ನಾಗರಿಕತೆಯ ಇಂತಹ ಉನ್ನತ ಕಾಲವೆಂದು ಹೇಳಲಾಗುತ್ತಿದೆ. ಆದರೆ

ಇಂತಹ ಕಾಲದಲ್ಲಿ ಜರುಗಿದ ಬಾಂಗ್ಲಾದೇಶದ ದುರಂತದ ಕಥೆ ಇಡೀ ಮಾನವ ಕುಲದ ಇತಿಹಾಸದಲ್ಲಿ ಎಂದೂ ಜರುಗದಂತಹ ಭೀಕರ, ಕರಾಳ ಕೃತಿ ಎಂದರೆ ಅತಿಶಯೋಕ್ತಿಯಾಗಲಾರದು.

ಆದರೆ ಹೀಗೇಕೆ ? ಎಂಬ ಪ್ರಶ್ನೆ ಭವಿಷ್ಯತ್ತಿನಲ್ಲಿ ಉದ್ಭವಿಸುವದು ಸಹಜವಾದದ್ದು. ಇಂದೂ ಸಹ ಈ ಪ್ರಶ್ನೆಗೆ ಉತ್ತರ ಕೊಡುವದು ಕಷ್ಟಸಾಧ್ಯವೆ. ಸಾಮಾನ್ಯವಾಗಿ ಒಂದು ಜನಾಂಗ ಇನ್ನೊಂದು ಜನಾಂಗದ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಲೆಂದೋ, ಅಥವಾ ಒಂದು ಭಾಗದ ವಿಪುಲ ಸಂಪತ್ತನ್ನು ತಮ್ಮ ಸ್ವಾರ್ಥಕ್ಕಾಗಿ ದೋಚಲೆಂದೋ ಅಥವಾ ಎರಡು ವರ್ಗಗಳ ನಡುವೆ ಆಧಿಪತ್ಯಕ್ಕಾಗಿ ನಡೆದ ಪೈಪೋಟಿಯಿಂದಾಗಿಯೋ ಎರಡು ರಾಷ್ಟ್ರಗಳ ನಡುವೆ ಕಲಹಗಳು, ಯುದ್ಧಗಳು ಜರುಗಿರುವದನ್ನು ಇತಿಹಾಸದಿಂದ ಬಲ್ಲೆವು. ಆದರೆ ಒಂದೇ ರಾಷ್ಟ್ರದ ಜನತೆಯಲ್ಲಿ ವಿರಸವುಂಟಾಗಿ ತಮ್ಮದೇ ಆದ ಸರಕಾರ, ಸೈನ್ಯ ಹಾಗೂ ಜನರಿಂದಲೇ ಉಂಟಾಗುವ ಗಂಡಾಂತರ ಇಂತಹ ಬೃಹತ್‌ಪ್ರಮಾಣದಲ್ಲಿ ಜರುಗಿದುದು ಅಸ್ವಾಭಾವಿಕ ಮತ್ತು ಆಘಾತಕರ. ಈ ದಾರುಣ ಕಥೆಯ ಉಗಮ ಕೇವಲ ಇತ್ತೀಚಿನ ಘಟನೆಗಳಲ್ಲಿ ಅಡಗಿರದೇ, ಅದು ಭಾರತದ ವಿಭಜನೆಯ ಪೀಠಿಕೆಯಲ್ಲಿಯೇ ಅಡಕವಾಗಿದ್ದು ೧೯೪೭ ರಲ್ಲಿ ಸ್ವತಂತ್ರ ಪಾಕಿಸ್ತಾನವು ಜನಿಸಿದಾಗಿನಿಂದಲೇ ರೂಪು ತಳೆಯಿತೆಂದರೆ ತಪ್ಪಾಗಲಾರದು. ನವೋದಿತ ಬಂಗ್ಲಾದೇಶದ ಇತಿಹಾಸವನ್ನು ಪರಿಚಯ ಮಾಡಿಕೊಂಡಾಗಲೇ ಈ ಅಂಶ ಬೆಳಕಿಗೆ ಬರುವದು.

೨

# ಐತಿಹಾಸಿಕ ಹಿನ್ನೆಲೆ: ವಂಗಭಂಗ

ಬ್ರಿಟಿಶರು ೧೯೪೭ ರಲ್ಲಿ ಭಾರತವನ್ನು ಇಬ್ಭಾಗ ಮಾಡಿ ಭಾರತ ಮತ್ತು ಪಾಕಿಸ್ತಾನ ಎಂಬ ಎರಡು ರಾಷ್ಟ್ರಗಳನ್ನು ಅಸ್ತಿತ್ವದಲ್ಲಿ ತಂದು ಭಾರತದಿಂದ ನಿರ್ಗಮಿಸಿದರು. ಈ ವಿಭಜನೆಗೆ ಬ್ರಿಟಿಶರ ಪ್ರೋತ್ಸಾಹ ಮತ್ತು ಆಶೀರ್ವಾದವೂ ಅಲ್ಲದೇ ಪ್ರತ್ಯಕ್ಷ ಹಾಗೂ ಪರೋಕ್ಷ ಪ್ರಯತ್ನಗಳೂ ಕಾರಣವಾದವು. ಭಾರತ ಸ್ವಾತಂತ್ರ್ಯ ಚಳವಳಿಯು ಮಹಾತ್ಮಾ ಗಾಂಧಿ ಮತ್ತು ಇತರ ನಾಯಕರುಗಳ ನಿರ್ದೇಶನದಲ್ಲಿ ವ್ಯಾಪಕವಾಗಿ ಹಬ್ಬಿದಾಗ ಭಾರತೀಯರಲ್ಲಿ ರಾಷ್ಟ್ರೀಯ ಭಾವನೆಯನ್ನು ನಿಸ್ತೇಜಗೊಳಿಸುವ ಮಾರ್ಗವನ್ನು ಬ್ರಿಟಿಶರು ಹುಡುಕತೊಡಗಿದರು. ಭಾರತೀಯರ ರಾಷ್ಟ್ರೀಯ ಭಾವನೆಯನ್ನು ಹತ್ತಿಕ್ಕಲು ಭಾರತದ ವಿವಿಧ ಜನಾಂಗಗಳ ಹಾಗೂ ಗುಂಪುಗಳ ನಡುವೆ ಭಿನ್ನಾಭಿಪ್ರಾಯವನ್ನು ಹುಟ್ಟಿಸುವದು ಒಂದು ಪ್ರಮುಖ ಮಾರ್ಗವೆನಿಸಿತು. ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಬ್ರಿಟಿಶರು ಮುಸ್ಲಿಮರಲ್ಲಿ ಕಂಡುಬಂದ ನಿರಾಶೆ ಮತ್ತು ಅತೃಪ್ತಿಯ ಉಪಯೋಗವನ್ನು ತೆಗೆದುಕೊಂಡು ಅವರಿಗೆ ಉತ್ತೇಜನ ಕೊಡುತ್ತಾ ಬಂದರು. ಆಗ ಭಾರತದ ವ್ಹಾಯಿಸರಾಯ್ ಆಗಿದ್ದ ಲಾರ್ಡ ಕರ್ಝನ್ನನು ಈ ನೀತಿಯ ಜನಕನಾದನು. ಕ್ರಾಂತಿಕಾರಿ ಪ್ರದೇಶವೆನಿಸಿಕೊಂಡಿದ್ದ ಬಂಗಾಳ ಪ್ರಾಂತವನ್ನು ೧೯೦೫ ರಲ್ಲಿ ಒಂದೂ ಬಹುಸಂಖ್ಯಾಕ ಪಶ್ಚಿಮ

ಮತ್ತು ಮುಸ್ಲಿಮ ಬಹುಸಂಖ್ಯಾಕ ಪೂರ್ವ ಬಂಗಾಳ ಎಂದು ವಿಭಜಿಸಿದನು. ಇದು ಕೇವಲ ಆಡಳಿತದ ದೃಷ್ಟಿಯಿಂದ ಮಾಡಿದ ನಿರ್ಣಯವೆಂದು ಕರ್ಝನ್ ಹೇಳಿದನಾದರೂ ಬಂಗಾಳದ ವಿಭಜನೆಯು ರಾಷ್ಟ್ರೀಯತೆಯನ್ನು ಹತ್ತಿಕ್ಕುವ ಮತ್ತು ಹಿಂದೂ, ಮುಸ್ಲೀಮ ಭಾಗಗಳನ್ನು ಬೇರೆ ಮಾಡುವ ಉದ್ದೇಶವನ್ನು ಹೊಂದಿದ್ದಿತು. ಈ ವಿಭಜನೆಯನ್ನು ಮುಸ್ಲಿಂ ಪ್ರಧಾನ ಪ್ರಾಂತ್ಯವನ್ನು ಸೃಷ್ಟಿಸುವದರ ಮೂಲಕ ಮುಸ್ಲಿಮರಿಗೆ ಉತ್ತೇಜನ ಕೊಡುವ ದೃಷ್ಟಿಯಿಂದಲೇ ಮಾಡಲಾಗಿತ್ತು, ಇದೇ ಸಮಯದಲ್ಲಿ, ಎಂದರೆ ೧೯೦೬ ರಲ್ಲಿ, ಆಗಾಖಾನರ ಹಿರಿತನದಲ್ಲಿ ತಮ್ಮನ್ನು ಭೆಟ್ಟಿಯಾದ ಮುಸ್ಲಿಂ ನಿಯೋಗದವರನ್ನು ತಮ್ಮ ಹಕ್ಕುಬಾಧ್ಯತೆಗಳ ರಕ್ಷಣೆಗಾಗಿ ಮುಸ್ಲಿಂಲೀಗ ಪಕ್ಷವನ್ನು ಸ್ಥಾಪಿಸಿಕೊಳ್ಳಲು ಅವರು ಪ್ರೋತ್ಸಾಹಿಸಿದರು. ೧೯೦೬ ರಲ್ಲಿ ಪೂರ್ವ ಬಂಗಾಳದ ನವಾಬ್-ವಾಖಿರ್-ಉಲ್-ಮುಲ್ಕ ಎಂಬುವನು ಭಾರತದಾದ್ಯಂತ ಇರುವ ಮುಸ್ಲಿಮರ ಸಮ್ಮೇಳನವನ್ನು ಕರೆದಿದ್ದನು. ಮುಸ್ಲಿಂ ಜನಾಂಗದವರ ಶಿಕ್ಷಣ ಸಮಸ್ಯೆಗಳನ್ನು ಚರ್ಚಿಸಲೆಂದು ಕರೆದ ಈ ಸಮ್ಮೇಳನವೇ ಮುಸ್ಲಿಂ ರಾಜಕೀಯ ಪಕ್ಷದ ಉದಯಕ್ಕೆ ಸಹಾಯಕವಾಯಿತು. ೧೯೦೬ ರ ಡಿಸಂಬರ್ ೩೦ ನೇ ದಿನಾಂಕ ಢಾಕಾದ ನವಾಬರು ಮುಸ್ಲಿಮ ಲೀಗ್ ಎಂಬ ಮುಸ್ಲಿಮರ ರಾಜಕೀಯ ಪಕ್ಷವನ್ನು ಸ್ಥಾಪಿಸಬೇಕೆಂಬ ನಿರ್ಣಯವನ್ನು ಮಂಡಿಸಿದಾಗ ಅದು ಅಂಗೀಕೃತವಾಯಿತು. ಹೀಗೆ ಪೂರ್ವ ಬಂಗಾಳವೇ ಮುಸ್ಲಿಂ ಲೀಗ್ ಜನಿಸಿದ ಸ್ಥಳವಾಯಿತು. ಆದರೂ ಮುಂದೆ ಮುಸ್ಲಿಂ ಲೀಗಿನ ಚಟುವಟಿಕೆಗಳು ಪಶ್ಚಿಮ ಭಾಗಕ್ಕೆ

ನಿಮಿತವಾದವು. ಮತ್ತು ೧೯೧೧ ರಲ್ಲಿ ಬಂಗಾಲದ ವಿಭಜನೆಯನ್ನು ಅಳಿಸಿದಾಗ ಮುಸ್ಲಿಂ ಲೀಗ್ ಮೌನ ತಳೆದಿತ್ತು. ಇದೇ ಸಾಲಿನಲ್ಲಿಯೇ ಅಖಿಲ ಭಾರತ ಹಿಂದೂ ಮಹಾಸಭೆಯು ಅಸ್ತಿತ್ವಕ್ಕೆ ಬಂದದ್ದು ಗಮನಾರ್ಹವಾಗಿದೆ. ಇದು ನಮ್ಮ ಇತಿಹಾಸದ ಒಂದು ಕುತೂಹಲಕಾರಿ ಘಟನೆಯಾಗಿದೆ. ಕರ್ಝನ್‌ನು ಮುಸ್ಲಿಂ ನಿಯೋಗದವರಿಗೆ ಶಾಸನಸಭೆಗಳಲ್ಲಿ ಮತ್ತು ಆಡಳಿತದಲ್ಲಿ ಕೇವಲ ತಮ್ಮ ಜನಸಂಖ್ಯೆಗನುಗುಣವಾಗಿಯಲ್ಲದೆ ಮುಸ್ಲಿಂ ಮತೀಯರ ರಾಜಕೀಯ ಪ್ರಾಮುಖ್ಯತೆಯ ದೃಷ್ಟಿಯಿಂದ ತಮಗೆ ಹೆಚ್ಚು ಪ್ರಾತಿನಿಧ್ಯವನ್ನು ಬೇಡಲು ಪ್ರೋತ್ಸಾಹಿಸಿದನು. ಇದೂ ಅಲ್ಲದೆ ತಮಗೆ ಪ್ರತ್ಯೇಕ ಪ್ರಾತಿನಿಧ್ಯವಿರಬೇಕೆಂಬ ಬೇಡಿಕೆಯನ್ನು ಮುಂದಿಡುವಂತೆ ಪ್ರೋತ್ಸಾಹಿಸಿದನು. ಈ ನೀತಿಯನ್ವಯ ಮುಂದೆ ತರಲಾದ ಎಲ್ಲಾ ಸುಧಾರಣೆಗಳಲ್ಲಿಯೂ ಮುಸ್ಲಿಮರಿಗೆ, ಸಿಖರಿಗೆ, ಭಾರತೀಯ ಕ್ರಿಶ್ಚಿಯನರು ಮುಂತಾದವರಿಗೆ ಬ್ರಿಟಿಷರು ಪ್ರತ್ಯೇಕ ಪ್ರಾತಿನಿಧ್ಯವನ್ನು ಕೊಡುತ್ತಾ ಬಂದರು. ಇದರಿಂದ ಭಾರತೀಯತೆಯಲ್ಲಿ ಒಡಕುಂಟಾಗಿ ಮುಸ್ಲಿಮರು ಮತ್ತು ಇತರ ಮತಗಳವರು ತಮ್ಮದೇ ಆದ ಧ್ಯೇಯ ಹಾಗೂ ಗುರಿಗಳನ್ನು ನಿರೂಪಿಸಿಕೊಳ್ಳುತ್ತಾ ಬಂದರು. ಈ ಹಿನ್ನೆಲೆಯಲ್ಲಿ ಮುಸ್ಲಿಮರು ಭಾರತವು ಸ್ವತಂತ್ರವಾಗಬೇಕಾದರೆ ತಮಗೆ ಪ್ರತ್ಯೇಕ ಹಾಗು ವಿಶೇಷ ಸೌಲಭ್ಯಗಳು ಬೇಕೆಂಬ ಕರಾರನ್ನು ಹಾಕತೊಡಗಿದರು. ಬ್ರಿಟಿಷರಿಗೆ ಬೇಕಾದದ್ದೂ ಇಷ್ಟೇ. ಇದನ್ನೇ ನೆಪಮಾಡಿ ಅವರು ಭಾರತದ ಹಿಂದುಗಳು, ಮುಸ್ಲಿಮರು ಮತ್ತು ಇತರ ಅಲ್ಪಸಂಖ್ಯಾಕರುಗಳನ್ನ

ಒಮ್ಮತ ಉಂಟಾಗುವವರೆಗೆ ತಾವು ಅಧಿಕಾರ ಹಸ್ತಾಂತರ ಮಾಡಲಾಗುವದಿಲ್ಲವೆಂದು ಹೇಳಿದರು.

ಮುಸ್ಲಿಂ ಲೀಗ್‌ನ ನಾಯಕ "ಕಾಯಿದೆ ಆಜಮ್" ಮಹಮ್ಮದಾಲಿ ಜಿನ್ನಾರವರು ಮೊದಮೊದಲು ರಾಷ್ಟ್ರೀಯ ಮುಸ್ಲಿಮರೆನಿಸಿಕೊಂಡ ವ್ಯಕ್ತಿ. ಎಂದರೆ ಬ್ರಿಟಿಶರ ಆಡಳಿತದಿಂದ ವಿಮೋಚನೆಯಾಗಬೇಕೆಂಬ ಗುರಿಯಲ್ಲಿ ವಿಶ್ವಾಸವನ್ನು ಹೊಂದಿದ ಮುಸ್ಲಿಮರಲ್ಲಿ ಅವರೂ ಒಬ್ಬರಾಗಿದ್ದು ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಹೋರಾಡುವವರಲ್ಲೊಬ್ಬರಾಗಿದ್ದರು. ಆದರೆ ಕ್ರಮೇಣ ಇವರು ಬ್ರಿಟಿಷರು ಬೀಸಿದ ಬಲೆಗೆ ಬಿದ್ದರು. ಮುಸ್ಲಿಂಲೀಗಿನ ಧ್ಯೇಯಧೋರಣೆಗಳನ್ನು ಬ್ರಿಟಿಷರಿಗೆ ಒಪ್ಪಿತವಾಗುವ ರೀತಿಯಲ್ಲಿ ಮಾರ್ಪಾಡು ಮಾಡುವಲ್ಲಿ ಜಿನ್ನಾರವರು ಸಹಾಯಕರಾದರು. ಇವರು ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ನೀತಿಯನ್ನು ವಿರೋಧಿಸತೊಡಗಿದರು. ೧೯೩೭ ರಲ್ಲಿ ಪ್ರಾಂತ್ಯ ಶಾಸನ ಸಭೆಗಳಿಗೆ ಜರುಗಿದ ಚುನಾವಣೆಗಳಲ್ಲಿ ಮುಸ್ಲಿಂಲೀಗ್ ಅನುಭವಿಸಿದ ಸೋಲಿನಿಂದ ಕುಪಿತರಾದ ಜಿನ್ನಾ ಕಾಂಗ್ರೆಸ್ಸನ್ನು ಉಗ್ರವಾಗಿ ಟೀಕಿಸಿದರಲ್ಲದೆ ಕಾಂಗ್ರೆಸ ಮಂತ್ರಿಮಂಡಳಗಳು ಅಧಿಕಾರಕ್ಕೆ ಬಂದ ದಿನವನ್ನು ಶೋಕದಿನವೆಂದು ಆಚರಿಸಲು ಕರೆಕೊಟ್ಟರು. ಕಾಂಗ್ರೆಸ್ ಮಂತ್ರಿಮಂಡಳಗಳು ವಿವಿಧ ಪ್ರಾಂತ್ಯಗಳಲ್ಲಿ ನಡೆಸಿದುವೆಂದು ಹೇಳಲಾದ ಮುಸ್ಲಿಂ ವಿರೋಧಿ ಹಾಗು ದಮನ ನೀತಿಯನ್ನು ಮುಂದುಮಾಡಿ ಮುಸ್ಲಿಮರ ಹಿತಾಸಕ್ತಿಗಳು ಹಿಂದೂಗಳ ಕೈಯಲ್ಲಿ ಸುರಕ್ಷಿತವಾಗಿರಲು ಸಾಧ್ಯವಿಲ್ಲವೆಂದು ಹೇಳುತ್ತಾ

ಹಿಂದು ಮತ್ತು ಮುಸ್ಲಿಮರು ಒಂದೇ ರಾಷ್ಟ್ರದಲ್ಲಿ ಜೀವಿಸುವದು ಸಾಧ್ಯವಿಲ್ಲ ಎಂಬ ನಿರ್ಣಯಕ್ಕೆ ಬಂದರು.

ಜಿನ್ನಾರವರು ವಾದಿಸಿದಂತೆ ಹಿಂದೂಗಳು ಹಾಗೂ ಮುಸ್ಲಿಮರು ಭಿನ್ನ ಮತದವರಾಗಿದ್ದು ಅವು ಭಿನ್ನ ರಾಷ್ಟ್ರೀಯ ಗುಂಪುಗಳಾಗಿವೆ. ಆದ್ದರಿಂದ ಮುಸ್ಲಿಂ ಪ್ರದೇಶಗಳನ್ನು ಭಾರತದಿಂದ ಬೇರ್ಪಡಿಸಿ ಮುಸ್ಲಿಮರದೇ ಆದ ಸ್ವತಂತ್ರ ರಾಷ್ಟ್ರವನ್ನು ನಿರ್ಮಿಸುವದು ಅನಿವಾರ್ಯ. ಜಿನ್ನಾರವರ ಈ ವಾದವನ್ನೇ "ದ್ವಿ-ರಾಷ್ಟ್ರ ಸಿದ್ಧಾಂತ" (Two nation theory) ಎಂದು ಕರೆಯಲಾಗಿದೆ, ಈ ದ್ವಿ-ರಾಷ್ಟ್ರ ತತ್ವದಂತೆ ಬ್ರಿಟಿಷರು ಭಾರತೀಯರಿಗೆ ಅಧಿಕಾರ ಹಸ್ತಾಂತರ ಮಾಡುವ ಮುನ್ನ ಪ್ರತ್ಯೇಕ ಮುಸ್ಲಿಂ ಬಹುಸಂಖ್ಯಾಕ ರಾಜ್ಯಗಳನ್ನು ನಿರ್ಮಿಸಬೇಕೆಂದು ಮುಸ್ಲಿಂ ಲೀಗಿನ ೧೯೪೦ ರ ಲಾಹೋರ ನಿರ್ಣಯದಿಂದ ಅದುವರೆಗೂ ಅಮೂರ್ತರೂಪದಲ್ಲಿದ್ದ ಪಾಕಿಸ್ತಾನದ ಕನಸು ಮೂರ್ತರೂಪ ತಳೆಯಿತು. ೧೯೪೦ ರ ಲಾಹೋರ ನಿರ್ಣಯವನ್ನು ಪೂರ್ವ ಪಾಕಿಸ್ತಾನದ ನಾಯಕರಲ್ಲೊಬ್ಬರಾಗಿದ್ದ ಎ. ಕೆ. ಫಜಲುಲ್ ಹಕ್‌ರವರೇ ಮಂಡಿಸಿದ್ದರು.

ಲಾಹೋರ್ ನಿರ್ಣಯವು ಅಂಗೀಕೃತವಾಗುವ ಮುನ್ನ ಅನೇಕ ಮುಸ್ಲಿಮರು ಪಾಕಿಸ್ತಾನದ ಕನಸು ಕಾಣುತ್ತಿದ್ದರು. ಭಾರತದ ಉಪಖಂಡದಲ್ಲಿ ಪ್ರತ್ಯೇಕ ಮುಸ್ಲಿಂ ರಾಜ್ಯವನ್ನು ಸ್ಥಾಪಿಸಬೇಕೆಂಬ ಅಭಿಪ್ರಾಯವನ್ನು ವ್ಯಕ್ತಮಾಡಿದವರಲ್ಲಿ ಕವಿ-ದಾರ್ಶನಿಕ ಇಕ್‌ಬಾಲರು ಮೊದಲಿಗರು. "ಸಾರೆ ಜಹಾಸೆ ಅಚ್ಛಾ

ಹಿಂದುಸ್ತಾನ್ ಹಮಾರಾ” ಎಂದು ಹಿಂದುಸ್ತಾನದ ವೈಭವವನ್ನು ಹಾಡಿದ್ದ ಇವರೇ ಪಾಕಿಸ್ತಾನದ ನಾಂದಿಯನ್ನು ಹಾಡಿದುದು ನಮ್ಮ ಇತಿಹಾಸದ ಮತ್ತೊಂದು ಕುತೂಹಲಕಾರಿ ಘಟನೆಯಾಗಿದೆ. ಅವರು ೧೯೩೦ ರಲ್ಲಿ ಲಾಹೋರಿನಲ್ಲಿಯೇ ಸೇರಿದ್ದ ಮುಸ್ಲಿಂ ಲೀಗಿನ ವಾರ್ಷಿಕ ಅಧಿವೇಶನದ ಅಧ್ಯಕ್ಷೀಯ ಭಾಷಣದಲ್ಲಿ ಪಂಜಾಬ್, ವಾಯುವ್ಯ ಸರಹದ್ದು ಪ್ರಾಂತ್ಯ, ಸಿಂಧ್ ಮತ್ತು ಬಲೂಚಿಸ್ತಾನಗಳನ್ನು ಒಟ್ಟುಗೂಡಿಸಿದ ಪ್ರತ್ಯೇಕ ಮುಸ್ಲಿಂ ಭಾಗವನ್ನು ರಚಿಸಬೇಕೆಂದು ಸಲಹೆ ಮಾಡಿದರು. ಆಗ ಅವರು ಪ್ರತ್ಯೇಕ ರಾಷ್ಟ್ರದ ಸಲಹೆಯನ್ನು ಮಾಡಿರಲಿಲ್ಲ. ಆದಾಗ್ಯೂ ಸರ್ ಇಖ್‌ಬಾಲರ ಯೋಜನೆಯಲ್ಲಿ ಪೂರ್ವ ಪಾಕಿಸ್ತಾನವನ್ನು ಸೇರಿಸದೇ ಇರುವದು ಇಂದಿನ ಪರಿಸ್ಥಿತಿಯಲ್ಲಿ ಗಮನಾರ್ಹವಾಗಿದೆ.

ತದನಂತರ ದುಂಡು ಮೇಜಿನ ಪರಿಷತ್ತಿನ ಕಾಲಕ್ಕೆ ಇಂಗ್ಲೆಂಡ್‌ನಲ್ಲಿ ವಾಸವಾಗಿದ್ದ ಕೆಲವು ಭಾರತೀಯ ಮುಸ್ಲಿಂ ಯುವಕರು ವ್ಯಕ್ತಮಾಡಿದ ಯೋಜನೆಯಲ್ಲಿ ಪ್ರತ್ಯೇಕ ಮುಸ್ಲಿಂ ರಾಷ್ಟ್ರದ ಅಂಶ ಅಡಕವಾಗಿತ್ತು. ಇದು ಕೇವಲ ವಿದ್ಯಾರ್ಥಿಗಳು ತಮ್ಮ ಲಹರಿಯಲ್ಲಿ ವ್ಯಕ್ತಮಾಡಲಾದ ಯೋಜನೆಯಾದ್ದರಿಂದ ಇದನ್ನು ಯಾರೂ ಹೆಚ್ಚು ಗಣನೆಗೆ ತೆಗೆದುಕೊಳ್ಳಲಿಲ್ಲ. ಬರ್ಮಾವನ್ನು ಭಾರತದಿಂದ ಪ್ರತ್ಯೇಕಗೊಳಿಸಲು ಸಾಧ್ಯವಾಗಿರುವಾಗ ಪ್ರತ್ಯೇಕ ಪಾಕಿಸ್ತಾನ ಏಕೆ ಆಗಬಾರದೆಂದು ಅವರು ವಾದಿಸಿದ್ದರು. ೧೯೩೩ ರ ಈ ಕೇಂಬ್ರಿಜ್ ವಿದ್ಯಾರ್ಥಿಗಳ ಯೋಜನೆಯಲ್ಲಿಯೂ ಪೂರ್ವ ಪಾಕಿಸ್ತಾನದ (ಬಂಗಾಳದ) ಉಲ್ಲೇಖವಿಲ್ಲದಿರುವುದೂ

ಒಂದು ವೈಶಿಷ್ಟ್ಯ. ಅವರ ಅಭಿಪ್ರಾಯದಲ್ಲಿ ಪಾಕಿಸ್ತಾನ (PAKISTAN) ಶಬ್ದದ ಅಕ್ಷರ ಪಲ್ಲಟದಂತೆ "ಪ" (P) ಪಂಜಾಬ್ "ಆ" (A) ಅಪ್ಘಾನಿಸ್ತಾನ "ಕ" (K) ಕಾಶ್ಮೀರ "ಸ" (S) ಸಿಂದ್ ಮತ್ತು "ತಾನ್" (TAN) ಬಲೂಚಿಸ್ತಾನ ಈ ವಿವಿಧ ಭಾಗಗಳಿಂದ ಕೂಡಿದ ಹೆಸರೇ ಈ ಮುಸ್ಲಿಂ ರಾಷ್ಟ್ರದ ಹೆಸರಾಯಿತು. ಪಾಕಿಸ್ತಾನ ಹೆಸರಿನ ಅಕ್ಷರ ಪಲ್ಲಟದ ರೀತ್ಯವೂ ಕೂಡ ಬಂಗಾಳ (ಪೂರ್ವ ಪಾಕಿಸ್ತಾನ) ಕ್ಕೆ ಸ್ಥಾನವೇ ಇಲ್ಲ. ಆದರೆ ೧೯೩೭ ರಲ್ಲಿ ಫಜಲುಲ್ ಹಕ್‌ರವರ ಕೃಷಕ್ ಪ್ರಜಾ ಪಕ್ಷವು ಪೂರ್ವ ಬಂಗಾಲದಲ್ಲಿ ಸ್ಥಾಪಿತವಾದನಂತರ ರಹಮತ ಅಲಿಯವರು "ಬಂಗ್-ಎ-ಇಸ್ಲಾಮ" ಹಾಗೂ ಹೈದರಾಬಾದ್ (ಡೆಕ್ಕನ್)ನಲ್ಲಿ "ಒಸ್ಮಾನಿಸ್ಥಾನ" ಎಂಬ ಇನ್ನೂ ಎರಡು ಮುಸ್ಲಿಂ ರಾಷ್ಟ್ರಗಳು ಸ್ಥಾಪಿತವಾಗಬೇಕೆಂದರು. ಇವೆರಡೂ ಭಾರತ ಮತ್ತು ಪಶ್ಚಿಮ ಪಾಕಿಸ್ತಾನದಿಂದ ಸ್ವತಂತ್ರವಾಗಿದ್ದು ಒಟ್ಟು ಮೂರು ಮುಸ್ಲಿಂ ರಾಷ್ಟ್ರಗಳನ್ನು ಸ್ಥಾಪಿಸುವ ಕನಸು ಅವರು ಕಂಡಿದ್ದರು.

ಇದೂ ಅಲ್ಲದೆ ರಹಮತಾಲಿ ಯೋಜನೆ, ಕೂಪಲ್ಯಾಂಡ್ ಯೋಜನೆ, ಡಾ॥ ಸೈಯದ್ ಅಬ್ದುಲ್ ಲತೀಫ್, ಸರ್ ಅಬ್ದುಲ್ಲಾ ಹರೂನ್, ನವಾಬ್ ಸರ್ ಮೊಹಮದ್ ಷಾ ನವಾಜ್ ಖಾನ್, ಆಗಿನ ಪಂಜಾಬ ಪ್ರಾಂತ್ಯದ ಪ್ರಧಾನಿ ಸರ್ ಸಿಕಂದರ್ ಹಯಾತ್ ಖಾನ್ ಮುಂತಾದವರೂ ತಮ್ಮ ತಮ್ಮ ಯೋಜನೆಗಳನ್ನು ಮುಂದಿಟ್ಟರು. ಇವುಗಳಲ್ಲಿ ಪಂಜಾಬದ ಪ್ರಧಾನಿ ಹಯಾತ್ ಖಾನ್‌ರ ಅಭಿಪ್ರಾಯವನ್ನು ಲೀಗಿನವರು

ಗಣನೆಗೆ ತೆಗೆದುಕೊಳ್ಳಲಾಯಿತಾದರೂ ಈ ಎಲ್ಲಾ ಯೋಜನೆಗಳು ಕೇವಲ ಊಹಾಪೋಹಗಳಿಂದ ಕೂಡಿದವುಗಳಾದ್ದರಿಂದ ಅವುಗಳು ಹೆಚ್ಚು ಗಣನೆಗೆ ಬರಲಿಲ್ಲ. ಆದರೂ ೧೯೪೦ ರ ಲಾಹೋರ ನಿರ್ಣಯವನ್ನು ರೂಪಿಸುವುದರಲ್ಲಿ ಈ ಎಲ್ಲಾ ಅಭಿಪ್ರಾಯಗಳು ಸಾಕಷ್ಟು ಮಹತ್ವದ ಪಾತ್ರವನ್ನು ಹೊಂದಿದ್ದುವೆಂಬುವದರಲ್ಲಿ ಸಂಶಯವಿಲ್ಲ.

ಆದರೆ ಈ ಎಲ್ಲಾ ಯೋಜನೆಗಳಲ್ಲಿ ಅಡಕವಾಗಿದ್ದ ತತ್ವಕ್ಕೂ ಮುಸ್ಲಿಂಲೀಗ ನಾಯಕ ಮಹಮದಾಲಿ ಜಿನ್ನಾರವರ ಅಭಿಪ್ರಾಯಕ್ಕೂ ಸಾಮ್ಯವಿರಲಿಲ್ಲ. ಅಖಿಲ ಭಾರತ ಮುಸ್ಲಿಂ ಜನಾಂಗದ ನಾಯಕರಾದ ಅವರಿಗೆ ಭಾರತದ ಎಲ್ಲಾ ಮುಸ್ಲಿಂ ಅಲ್ಪಸಂಖ್ಯಾಕರ ಹಿತರಕ್ಷಣೆ ಮುಖ್ಯ ಉದ್ದೇಶವಾಗಿತ್ತು. ಪಾಕಿಸ್ತಾನ ಚಳುವಳಿಯಲ್ಲಿ ಕೇವಲ ಮುಸ್ಲಿಂ ಬಹುಸಂಖ್ಯಾಕ ಪ್ರದೇಶಗಳ ಜನರೇ ಅಲ್ಲದೆ ಉತ್ತರ ಪ್ರದೇಶ (ಅಂದಿನ ಸಂಯುಕ್ತ ಪ್ರಾಂತ್ಯ) ಬಿಹಾರ, ಮುಂಬಯಿ ಮುಂತಾದ ಪ್ರಾಂತ್ಯಗಳ ಮುಸ್ಲಿಮರೂ ಕೂಡ ಹೆಚ್ಚು ಆಸಕ್ತಿ ವಹಿಸಿದರಲ್ಲದೆ ಹೆಚ್ಚಿನ ಸೇವೆ ಸಲ್ಲಿಸಿದರು. ಇವನೆಲ್ಲಾ ಗಣನೆಗೆ ತೆಗೆದುಕೊಂಡಾಗ ಮುಸ್ಲಿಂ ಲೀಗ್‌ದವರು ಪ್ರತ್ಯೇಕ ಮುಸ್ಲಿಂ ರಾಷ್ಟ್ರವನ್ನು ನಿರ್ಮಿಸುವುದರ ಬಗ್ಗೆ ಹೆಚ್ಚು ಉತ್ಸುಕರಾಗಿರಲಿಲ್ಲವೆಂದು ತೋರುತ್ತದೆ. ಬಹಳ ಮಟ್ಟಿಗೆ ಅವರು ಮುಸ್ಲಿಮರ ಹಿತಾಸಕ್ತಿಗಳನ್ನು ರಕ್ಷಿಸಿ ಮುಸ್ಲಿಮರಿಗೆ ಭಾರತ ಸರಕಾರದಲ್ಲಿ ತಮ್ಮ ಜನಸಂಖ್ಯೆಗಿಂತಲೂ ಹೆಚ್ಚು ಪ್ರಮಾಣದಲ್ಲಿ ಸೌಲಭ್ಯಗಳನ್ನು ಪಡೆಯುವ ಗುರಿಯನ್ನಿಟ್ಟುಕೊಂಡಿದ್ದರೆಂದು ತರ್ಕಿಸಬಹುದು. ಆದ್ದರಿಂದಲೇ

೧೯೪೬ ರ 'ಕ್ಯಾಬಿನೆಟ್ ನಿಯೋಗ'ದ ಯೋಜನೆಯನ್ನು ಮುಸ್ಲಿಂಲೀಗ್ ಕೂಡಲೆ ಅಂಗೀಕರಿಸಿತು. ಈ ಯೋಜನೆಯ ಪ್ರಕಾರ ಭಾರತ ಒಕ್ಕೂಟದಲ್ಲಿ ಮುಸ್ಲಿಮರು ಮತ್ತು ಸಂಸ್ಥಾನಿಕರು ಕೇಂದ್ರ ಸರಕಾರದ ಮೇಲೆ ಸಂಪೂರ್ಣ ಹತೋಟಿಯನ್ನು ಹೊಂದಲು ಅವಕಾಶವಿದ್ದಿತು. ಆದ್ದರಿಂದಲೇ ಮುಸ್ಲಿಂಲೀಗ್ ಈ ಯೋಜನೆಯನ್ನು ಒಪ್ಪಿಕೊಂಡಿದ್ದು ಜಿನ್ನಾರವರ ದ್ವಿ-ರಾಷ್ಟ್ರ ಸಿದ್ಧಾಂತವು ಮುಸ್ಲಿಮರಿಗೆ ಹಿಂದೂಗಳೊಡನೆ ಸರಿಸಮಾನ ರಾಜಕೀಯ ಪ್ರಾಮುಖ್ಯತೆ ಮತ್ತು ಸೌಲಭ್ಯಗಳನ್ನು ಒದಗಿಸಿಕೊಳ್ಳುವ ಸಾಧನವಾಗಿದ್ದಿತು. ೧೯೪೦ ರ ಲಾಹೋರ್ ನಿರ್ಣಯವನ್ನು ಕೂಲಂಕಷವಾಗಿ ಪರಿಶೀಲಿಸಿದಾಗಲೂ ಸಹ ಈ ಅಭಿಪ್ರಾಯಕ್ಕೆ ಪುಷ್ಟಿ ದೊರೆಯುತ್ತದೆ. ಈ ನಿರ್ಣಯವು ನಿಖರವಾಗಿರದೆ ಅಸ್ಪಷ್ಟತೆಯಿಂದ ಕೂಡಿದ ನಿರ್ಣಯವಾಗಿತ್ತು. ಈ ನಿರ್ಣಯದಂತೆ "ಭೌಗೋಲಿಕ ಸಂಲಗ್ನತೆಯುಳ್ಳ, ಮುಸ್ಲಿಂ ಬಹುಸಂಖ್ಯಾಕರಿರುವ, ಉದಾಹರಣೆಗಾಗಿ (ಅವಿಭಾಜಿತ) ಭಾರತದ ವಾಯುವ್ಯ ವಲಯ ಮತ್ತು ಪೂರ್ವ ವಲಯದ ಭಾಗಗಳನ್ನು ಒಟ್ಟುಗೂಡಿಸಿ ಮುಸ್ಲಿಂ ಘಟಕಗಳನ್ನಾಗಿ ರಚಿಸಬೇಕು. ಮತ್ತು ಆಯಾ ಘಟಕಗಳ ಸ್ವಾಯತ್ತತೆ ಮತ್ತು ಸಾರ್ವಭೌಮತ್ವವನ್ನು ಹೊಂದಿದ 'ಸ್ವತಂತ್ರ ರಾಜ್ಯ' ಗಳನ್ನಾಗಿ ನಿರ್ಮಿಸಬೇಕು" ಎಂದು ಒತ್ತಾಯಿಸಲಾಗಿತ್ತು. ಎಂದರೆ ಈ ನಿರ್ಣಯದಲ್ಲಿಯೂ ಈ ಎಲ್ಲಾ ಘಟಕಗಳನ್ನು ಹೊಂದಿದ ಒಂದೇ ಮುಸ್ಲಿಂ ರಾಷ್ಟ್ರದ ನಿರ್ಮಾಣದ ಬೇಡಿಕೆ ಅಡಕವಾಗಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಈ ನಿರ್ಣಯದಲ್ಲಿ ಪ್ರಥಮಬಾರಿಗೆ ಭಾರತದ

ಪೂರ್ವಭಾಗದ ಮುಸ್ಲಿಂ ಪ್ರದೇಶದ ಬಗ್ಗೆ ಉಲ್ಲೇಖವಿದೆಯಾದರೂ ಅದು ವಾಯುವ್ಯ ಭಾಗದೊಡಗೂಡಿರಬೇಕೆಂಬ ಅಭಿಪ್ರಾಯವೇ ಉಂಟಾಗುವದಿಲ್ಲ. ಈ ನಿರ್ಣಯದಲ್ಲಿ ಬಳಸಲಾದ 'ಸ್ವತಂತ್ರ ರಾಜ್ಯಗಳು', 'ಸಾರ್ವಭೌಮತ್ವ', 'ಸ್ವಾಯತ್ತತೆ' ಮುಂತಾದ ಪದಗಳನ್ನು ಖಚಿತಾರ್ಥದಲ್ಲಿ ಬಳಸದೆ ಹಗುರವಾಗಿ ಉಪಯೋಗಿಸಲಾಗಿದೆ. ಈ ನಿರ್ಣಯದ ಅಭಿಪ್ರಾಯವಾದರೂ ಏನಾಗಿತ್ತು ? ಇದರ ಮೂಲ ಉದ್ದೇಶಗಳ ಬಗ್ಗೆ ಊಹಿಸಿದರೆ: ಬಹುಶಃ ಮುಸ್ಲಿಮರು ಪಶ್ಚಿಮ ಹಾಗು ಪೂರ್ವ ಭಾರತದಲ್ಲಿ ಅವಶ್ಯವೆನಿಸಿದ ಭೂಭಾಗದ ಮಾರ್ಪಾಡುಗಳೊಂದಿಗೆ ಪ್ರತ್ಯೇಕ ಮುಸ್ಲಿಂ ಪ್ರಾಂತ್ಯಗಳನ್ನು ನಿರ್ಮಿಸಿ ಅವುಗಳನ್ನು ಭಾರತ ಒಕ್ಕೂಟದ ಘಟಕಗಳನ್ನಾಗಿ ಮಾಡಿ ಅವುಗಳಿಗೆ ಸಾಕಷ್ಟು ಸ್ವಾಯತ್ತತೆಯನ್ನು ಪಡೆಯುಕೊಳ್ಳುವ ಪ್ರಯತ್ನವಾಗಿತ್ತು. ಇದರಲ್ಲಿಯೂ ಪ್ರತ್ಯೇಕ ಮುಸ್ಲಿಂ ರಾಷ್ಟ್ರದ ಅಭಿಪ್ರಾಯವಿರಲಿಲ್ಲ. ಆದರೆ ಈ ನಿರ್ಣಯವು ಅಂಗೀಕೃತವಾದ ನಂತರ ಜರುಗಿದ ರಾಜಕೀಯ ಘಟನೆಗಳು ಮತ್ತು ಬ್ರಿಟಿಷರ ಧೋರಣೆಯಿಂದಾಗಿ ಮುಸ್ಲಿಂ ಲೀಗ್ ನಾಯಕರು ಕ್ರಮೇಣ ಪ್ರತ್ಯೇಕ ಮುಸ್ಲಿಂ ರಾಷ್ಟ್ರದ ಕನಸು ಕಂಡರು. ಪಾಕಿಸ್ತಾನ ಜಿನ್ನಾರವರ ಕನಸಿನ ಕೂಸು. ಡಾ॥ ಬಿ. ಆರ್. ಅಂಬೇಡ್ಕರವರ ಅಭಿಪ್ರಾಯದಲ್ಲಿ ಈ ಎಲ್ಲಾ ಘಟನೆಗಳು ಮುಸ್ಲಿಂ ರಾಜಕೀಯ, ಕಾಂಗ್ರೆಸ ಪಕ್ಷದ ನೀತಿ ಧೋರಣೆಗಳು, ಮಹಾತ್ಮಾ ಗಾಂಧಿಯವರು ಹಿಂದೂ-ಮುಸ್ಲಿಂ ಐಕ್ಯತೆ ಸಾಧಿಸಲು ಪ್ರಯತ್ನಿಸಿದ ರೀತಿಯಲ್ಲಿಯೇ ಅಡಗಿವೆ. ಮುಸ್ಲಿಮರ ರಾಜಕೀಯದಲ್ಲಿ ಹಂತಹಂತವಾಗಿ ಈ ಬೆಳವಣಿಗೆ

ಗಳು ಕಂಡುಬರುತ್ತವೆ. ಮತ್ತು ಪಾಕಿಸ್ತಾನ ಬೇಡಿಕೆಯು ಇದೇ ದೇಶದ ರಾಜಕೀಯ ಗತಿಯನ್ನೇ ಅವಲಂಬಿಸಿಕೊಂಡು ಹುಟ್ಟಿದ ಬೇಡಿಕೆಯಾಗಿದೆ ಎಂಬುದು ಅಂಬೇಡ್ಕರರ ಸ್ಪಷ್ಟ ಅಭಿಪ್ರಾಯ ವಾಗಿದೆ. ೧೯೨೦ ರಿಂದ ೧೯೪೦ ರ ವರೆಗಿನ ಭಾರತದ ಇತಿಹಾಸವು ಹಿಂದು ಮತ್ತು ಮುಸ್ಲಿಮರ ನಡುವೆ ಜರುಗಿದ ಆಂತರಿಕ ಯುದ್ಧದ ಕಥೆಯಾಗಿದ್ದು ಆಗಾಗ್ಗೆ ಎಲ್ಲೋ ಒಮ್ಮೆ ಶಸ್ತ್ರ ಸಜ್ಜಿತ ಶಾಂತಿ ನೆಲಸುತ್ತಿದ್ದಿತೆಂದು ಅಂಬೇಡ್ಕರವರು ತಮ್ಮ ಸ್ಪಷ್ಟ ಅಭಿಪ್ರಾಯ ಕೊಟ್ಟಿರುತ್ತಾರೆ. ಕೇವಲ ಕೆಲವು ರಾಜಕೀಯ ಸೌಲಭ್ಯಗಳಿಗಾಗಿ ಮತ್ತು ತಮ್ಮ ರಾಜಕೀಯ ಪ್ರಾಮುಖ್ಯತೆಯನ್ನು ಹೆಚ್ಚಿಸಿಕೊಳ್ಳುವ ಉದ್ದೇಶವನ್ನಿಟ್ಟುಕೊಂಡಿದ್ದ ಜಿನ್ನಾರವರು ಪ್ರತ್ಯೇಕ ಮುಸ್ಲಿಂ ರಾಷ್ಟ್ರದ ಸಾಧ್ಯತೆಯನ್ನು ಕಂಡುಕೊಂಡಾಗ ಅದರಿಂದ ಆಕರ್ಷಿತರಾದರು, ಪುಲಕಿತರಾದರು ಇದು ಅಸ್ವಾಭಾವಿಕವೇನೂ ಅಲ್ಲ. ಸ್ವತಂತ್ರ ರಾಷ್ಟ್ರದ ಸಾಧ್ಯತೆ ಇರುವಾಗ ಯಾವ ನಾಯಕನಾದರೂ ಆಕರ್ಷಿತನಾಗದೇ ಇರಲಾರ. ಭಾರತದ ಸ್ವಾತಂತ್ರ್ಯದ ಹಾದಿಯಲ್ಲಿ ಮುಸ್ಲಿಂ ಬೇಡಿಕೆ ಒಂದು ಭಾರಿ ಆತಂಕವಾಗಿದ್ದರಿಂದ ರಾಷ್ಟ್ರೀಯ ಕಾಂಗ್ರೆಸ್ ನಾಯಕರು ಪಾಕಿಸ್ತಾನ ಬೇಡಿಕೆಯನ್ನು ಒಂದು ರಾಜಕೀಯ ಅನಿವಾರ್ಯ ಎಂದು ಪರಿಗಣಿಸಿ ಗತ್ಯಂತರವಿಲ್ಲದೆ ಒಪ್ಪಿಕೊಳ್ಳಬೇಕಾಯಿತು. ಭಾರತೀಯರಿಗೆ ಹಸ್ತಾಂತರ ಮಾಡುವದಕ್ಕಾಗಿ ನಿಯುಕ್ತರಾಗಿದ್ದ ವೈಸ್‌ರಾಯ್ ಲಾರ್ಡ ಲೂಯಿ ಮೌಂಟ್ ಬ್ಯಾಟನ್ನರು ಈ ದಿಸೆಯಲ್ಲಿ ಘಟನೆಗಳನ್ನು ತ್ವರಿತಗೊಳಿಸಿದರು. ಮೌಂಟ್‌ಬ್ಯಾಟನ್ ಯೋಜನೆಯನ್ವಯ ಪಂಜಾಬ್ ಮತ್ತು

ಬಂಗಾಲ ಪ್ರಾಂತ್ಯಗಳನ್ನು ಒಡೆದು ಪಶ್ಚಿಮ ಪಂಜಾಬ್ ಭಾಗವನ್ನು ಹಾಗು ಪೂರ್ವ ಬಂಗಾಲ ಭಾಗವನ್ನು ಪಾಕಿಸ್ತಾನಕ್ಕೂ, ಪೂರ್ವ ಪಂಜಾಬ್ ಮತ್ತು ಪಶ್ಚಿಮ ಬಂಗಾಲವನ್ನು ಭಾರತಕ್ಕೂ ಸೇರಿಸಿ ೧೯೪೭ ರ ಅಗಸ್ಟ ೧೫ ರಂದು ಭಾರತ ಮತ್ತು ಪಾಕಿಸ್ತಾನ ಎಂಬ ಎರಡು ಪ್ರತ್ಯೇಕ ರಾಷ್ಟ್ರಗಳು ಉದಯವಾದವು. ಸಿಂಧ್, ಬಲೂಚಿಸ್ತಾನ, ವಾಯುವ್ಯ ಸರಹದ್ದು ಪ್ರಾಂತ್ಯ ಮತ್ತು ಆಸಾಮದ ಸಿಲ್ಹೆಟ್ ಜಿಲ್ಲೆ ಪಾಕಿಸ್ತಾನಕ್ಕೆ ಸೇರಿದವು.



# ೩

# ಭಿನ್ನ ಜನಾಂಗ

ಪಾಕಿಸ್ತಾನವು ಅಸ್ತಿತ್ವಕ್ಕೆ ಬಂದ ರೀತಿಯನ್ನು ಇದುವರೆಗೆ ಪರಿಶೀಲಿಸಿದ್ದೇವೆ. ಈ ಇತಿಹಾಸದಲ್ಲಿ ಒಂದು ಪ್ರಮುಖ ಅಂಶವೆಂದರೆ ಪಾಕಿಸ್ತಾನವು ಜಿನ್ನಾರವರ ತರ್ಕದಂತೆ ಎಲ್ಲಾ ವಿಧದಿಂದಲೂ ಹಿಂದೂಗಳಿಂದ ಭಿನ್ನ ರಾಷ್ಟ್ರೀಯತೆಯೆನಿಸಿ ಕೊಳ್ಳುವ ಮುಸ್ಲಿಂ ರಾಷ್ಟ್ರೀಯತೆಯ ಆಧಾರದ ಮೇಲೆ ಜನಿಸಿತೆಂದು ಹೇಳುವುದಕ್ಕಿಂತ ಅದು ಇಸ್ಲಾಂ ಧರ್ಮಾನುಯಾಯಿಗಳಿಂದ ಕೂಡಿದ ರಾಜ್ಯವಾಗಿ ಉದಯಿಸಿತೆನ್ನುವದು ಹೆಚ್ಚು ಸಮಂಜಸ. ಹಿಂದೂ ಸಂಸ್ಕೃತಿ. ಭಾಷೆ. ಧರ್ಮ ಮುಂತಾದವುಗಳು ಮುಸ್ಲಿಂ ಸಂಸ್ಕೃತಿ, ಭಾಷೆ. ಧರ್ಮಗಳಿಂದ ಭಿನ್ನವಾಗಿರುವದು ನಿಜ. ಆದರೆ ಈ ಎಲ್ಲಾ ಅಂಶಗಳಲ್ಲಿ ಇಸ್ಲಾಂ ಧರ್ಮ ಅಥವ ಮತಕ್ಕೆ ಹೆಚ್ಚು ಪ್ರಾಧಾನ್ಯ ದೊರೆತಂತೆ ತೋರುತ್ತದೆ. ಎಂದರೆ ಪಾಕಿಸ್ತಾನದ ಉದಯವು ಧರ್ಮದ ತಳಹದಿಯ ಮೇಲೆಯೇ ಆಯಿತೆಂದು ಹೇಳಬಹುದು. ರಾಷ್ಟ್ರೀಯತೆಯ ಇತರ ಪ್ರಮುಖ ಅಂಶಗಳಾದ ಭೌಗೋಲಿಕ ಸಮಗ್ರತೆ. ಒಂದೇ ಕುಲ, ಜನಾಂಗ. ಒಂದೇ ಭಾಷೆ ಮುಂತಾದವುಗಳನ್ನು ಕಡೆಗಣಿಸಿ ಕೇವಲ ಮುಸ್ಲಿಂ ಧರ್ಮಾನುಯಾಯಿಗಳಿರುವ ಭಾಗಗಳನ್ನೆಲ್ಲಾ ಒಂದುಗೂಡಿಸಿ ಪೂರ್ವ ಭಾರತದ ಮುಸ್ಲಿಂ ಪ್ರದೇಶಗಳು ಮತ್ತು ಪಶ್ಚಿಮ ಭಾರತದ ಮುಸ್ಲಿಂ ಪ್ರದೇಶಗಳನ್ನು

ಸೇರಿಸಿ ಒಂದು ಮುಸ್ಲಿಂ ರಾಷ್ಟ್ರವನ್ನು ನಿರ್ಮಿಸಲಾಯಿತು. ಪಶ್ಚಿಮ ಪಾಕಿಸ್ತಾನದಿಂದ ಒಂದು ಸಾವಿರ ಮೈಲಿ ದೂರದಲ್ಲಿರುವ ಪೂರ್ವ ಪಾಕಿಸ್ತಾನವು (ಪೂರ್ವಬಂಗಾಲ) ಪಾಕಿಸ್ತಾನದ ಒಂದು ಭಾಗವಾಯಿತು. ಈ ಎರಡೂ ವಿಭಾಗಗಳ ನಡುವೆ ಒಂದು ಸಾವಿರ ಮೈಲು ಭಾರತದ ಪ್ರದೇಶವಿದ್ದು ಪೂರ್ವ ಮತ್ತು ಪಶ್ಚಿಮ ಭಾಗಗಳ ನಡುವೆ ನೇರ ಸಂಪರ್ಕ ಭಾರತದ ಪ್ರದೇಶದ ಮುಖಾಂತರವೇ ಸಾಧ್ಯವಾಗಿತ್ತು. ಭಾರತವನ್ನು ತಪ್ಪಿಸಿ ಬೇರೆ ವಾಯು, ಅಥವಾ ಭೂಭಾಗದ ಮುಖಾಂತರ ಪೂರ್ವ ಪಾಕಿಸ್ತಾನವನ್ನು ತಲುಪಬೇಕಾದರೆ ಬಹಳ ಸುತ್ತಿಕೊಂಡು ಚೀನಾ, ಬರ್ಮಾದೇಶಗಳ ಮುಖಾಂತರ ಬರಬೇಕಾಗುತ್ತಿತ್ತು. ಈ ಮಾರ್ಗ ಸುಮಾರು ೩,೫೦೦ ಮೈಲುಗಳಷ್ಟು ದೂರವಾಗುತ್ತಿತ್ತು. ಜಲಮಾರ್ಗದಿಂದ ಬರಬೇಕಾದರೆ ಕರಾಚಿ ಬಂದರಿನಿಂದ ಭಾರತವನ್ನು ಸುತ್ತುಹಾಕಿ ಕೋಲಂಬೋ ಮುಖಾಂತರ ಪೂರ್ವ ಪಾಕಿಸ್ತಾನದ ಚಿತ್ತಗಾಂಗ್ ಬಂದರವನ್ನು ತಲುಪಬೇಕಾಗುತ್ತಿತ್ತು. ಇದು ಸುಮಾರು ೩,೦೦೦ ಮೈಲುಗಳಷ್ಟು ದೂರದ ದಾರಿ. ಪಶ್ಚಿಮ ಭಾಗದ ಲಾಹೋರ್ ಮತ್ತು ಪೂರ್ವಭಾಗದ ಡಾಕಾ ನಗರಗಳ ನಡುವಣ ದೂರ ಎರಡು ಬೇರೆ ರಾಷ್ಟ್ರಗಳ ನಡುವಣ ದೂರವೇನೋ ಎನಿಸುತ್ತಿತ್ತು. ಶಿಶಿರ ಗುಪ್ತಾರವರು ಹೇಳಿರುವಂತೆ ಇವೆರಡು ನಗರಗಳ ನಡುವಣ ದೂರ ಲಂಡನ್ ಮತ್ತು ವಾರ್ಸಾ ನಗರಗಳ ಅಥವಾ ರಂಗೂನ್ ಮತ್ತು ಕುನ್‌ಮಿಂಗ್ ಅಥವಾ ದಾರಾಎಸ್ ಸಲಾಮ್ ಮತ್ತು ಲುಸಾಕಾಗಳ ನಡುವಿನಷ್ಟು ಆಗಿದೆ. ಆದ

ಂದ ಒಂದೇ ದೇಶದ ಒಂದು ಭಾಗದಿಂದ ಇನ್ನೊಂದು ಭಾಗ ದೊಡನೆ ಸಂಪರ್ಕ ಸಾಧನೆಗೆ ನೆರೆ ರಾಷ್ಟ್ರಗಳ ಸಹಕಾರ ಮತ್ತು ಒಪ್ಪಿಗೆ ಬೇಕಾಗುತ್ತಿತ್ತು. ಭಾರತ ಪಾಕಿಸ್ತಾನಗಳ ನಡುವೆ ಸಂಬಂಧಗಳು ಎಷ್ಟೇ ಕೆಟ್ಟಿದ್ದರೂ ಭಾರತವು ಉದಾರ ಮನ ಸ್ಸಿನಿಂದ ಪಾಕಿಸ್ತಾನದ ಸಂಚಾರ ಮಾರ್ಗವನ್ನು ಎಂದೂ ಕಡಿದು ಹಾಕಿರಲಿಲ್ಲ. ಆದರೆ ೧೯೭೧ ರಲ್ಲಿ ಪಾಕಿಸ್ತಾನದ ಧೋರಣೆ ಯಿಂದಾಗಿಯೇ ಭಾರತವು ಪಾಕಿಸ್ತಾನದ ವಿಮಾನಗಳು ತನ್ನ ಮೇಲಿನ ವಾಯುಮಾರ್ಗವನ್ನು ಉಪಯೋಗಿಸದಂತೆ ನಿರ್ಬಂಧ ಹಾಕಿತು. ೧೯೭೧ ರ ಆದಿಭಾಗದಲ್ಲಿ ಪಾಕಿಸ್ತಾನದ ಇಬ್ಬರು ಆಕಾಶಗಳ್ಳರು ಇಂಡಿಯನ್ ಏರಲೈನ್ಸ್ ಸಂಸ್ಥೆಗೆ ಸೇರಿದ ಒಂದು ಪ್ರಯಾಣಿಕರ ವಿಮಾನವನ್ನು ಕಾಶ್ಮೀರದಿಂದ ಬಲಾತ್ಕಾರವಾಗಿ ಲಾಹೋರಿಗೆ ತಿರುಗಿಸಿ. ನಂತರ ಲಾಹೋರ್ ವಿಮಾನ ನಿಲ್ದಾಣ ದಲ್ಲಿ ಆ ವಿಮಾನವನ್ನು ಸುಟ್ಟು ಹಾಕಿದರು. ಪಾಕಿಸ್ತಾನ ಸರ ಕಾರದ ಸಮ್ಮತಿ ಮತ್ತು ಪ್ರಚೋದನೆಯಿಂದಲೇ ಈ ಘಟನೆ ಜರುಗಿತೆಂಬುದಕ್ಕೆ ಪಾಕಿಸ್ತಾನದ ಸರಕಾರ ಈ ಕೃತ್ಯವನ್ನೆಸಗಿದ ವರನ್ನು ರಕ್ಷಿಸಿಕೊಂಡದ್ದೇ ಸಾಕ್ಷಿ. ಈ ಘಟನೆಯಾದ ನಂತರ ಸ್ವಲ್ಪ ಕಾಲದಲ್ಲಿ ಪಶ್ಚಿಮ ಮತ್ತು ಪೂರ್ವ ಪಾಕಿಸ್ತಾನಗಳ ನಡುವೆ ವಿರಸ ಉಂಟಾಗಿ ಪಶ್ಚಿಮ ಪಾಕಿಸ್ತಾನದ ಸೈನಿಕರನ್ನು ಹೆಚ್ಚು ಸಂಖ್ಯೆಯಲ್ಲಿ ಪೂರ್ವಭಾಗಕ್ಕೆ ಕಳುಹಿಸಲಾರಂಭಿಸಿದರು. ಈ ಉದ್ದೇಶಕ್ಕೆ ನಮ್ಮ ವಾಯುಮಾರ್ಗವನ್ನು ಉಪಯೋಗಿ ಸಲು ಅವಕಾಶ ಕೊಡಲಿಲ್ಲ. ಆಗ ಚೀನಾ, ಬರ್ಮಾ ಮಾರ್ಗ ವಾಗಿ ಮತ್ತು ಸಿಲೋನ ಮುಖಾಂತರ ಸಮುದ್ರಮಾರ್ಗವಾಗಿ

ಸೈನಿಕರು ಮತ್ತು ಯುದ್ಧ ಸಾಮುಗ್ರಿಗಳನ್ನು ಸಾಗಿಸ ಲಾಯಿತು.

ಭೌಗೋಲಿಕ ಸಂಲಗ್ನತೆ, ಅಥವಾ ಸಮಗ್ರತೆ ಇಲ್ಲದಿರುವದು ಜಿನ್ನಾರವರ ಪಾಕಿಸ್ತಾನದ ಒಂದು ದೊಡ್ಡ ನ್ಯೂನತೆಯಾಗಿತ್ತು. ಒಂದೇ ದೇಶದ ಎರಡು ಭಾಗಗಳ ಜನರ ದೈಹಿಕ ಪ್ರತ್ಯೇಕತೆ ಯಿಂದಾಗಿ ಅವರಿಬ್ಬರಲ್ಲಿ ತಾವೂ ಒಂದೇ ರಾಷ್ಟ್ರದ ಪ್ರಜೆಗಳು ಎಂಬ ಭಾವನೆ ಹುಟ್ಟಲು ಸಾಧ್ಯವಾಗಲೇ ಇಲ್ಲ. ಮೇಲಾಗಿ ಪೂರ್ವ ಬಂಗಾಲಿಗಳು ಪಶ್ಚಿಮದ ಪಂಜಾಬ್, ಸಿಂಧ್, ಬಲೂ ಚಿಸ್ತಾನ ಮತ್ತು ಗಡಿ ಸರಹದ್ದಿನ ಜನರಿಗಿಂತ ಭಾಷೆ, ಸಂಸ್ಕೃತಿ, ಜನಾಂಗ, ಸಾಹಿತ್ಯ, ಐತಿಹಾಸಿಕ ಹಿನ್ನೆಲೆ ಮತ್ತು ಆಶೋತ್ತರ ಗಳು ಈ ಎಲ್ಲಾ ದೃಷ್ಟಿಯಿಂದ ಬೇರೆಯೇ ಆಗಿದ್ದರು. ಜನಾಂಗದ ಲಕ್ಷಣಗಳ ದೃಷ್ಟಿಯಿಂದ ಪಶ್ಚಿಮ ಪಾಕಿಸ್ತಾನದ ಜನರು ಹೆಚ್ಚು ಬಲಿಷ್ಠರು, ಎತ್ತರ ಕಾಯದವರು ಮತ್ತು ಸುಂದರವಾಗಿರುವ ಜನರಾಗಿದ್ದು ಇವರು ಮಧ್ಯ ಏಶಿಯಾದ ಜನರಾಗಿದ್ದಾರೆ. ಪೂರ್ವಪಾಕಿಸ್ತಾನದ ಜನರು ನಿಸ್ತೇಜ, ಗಿಡ್ಡ ಹಾಗು ಬಡಕಲ ಜನರು. ಇವರು ಆಗ್ನೇಯ ಏಷಿಯಾಕ್ಕೆ ಸೇರಿದ ಜನ. ಹೀಗೆ ಒಂದೇ ದೇಶದ ಈ ಎರಡು ಜನಾಂಗಗಳು ನಮ್ಮ ಭೂಭಾಗದ ಎರಡು ಭಿನ್ನ ಭಾಗಗಳಿಗೆ ಸೇರಿದವರಾಗಿ ದ್ದಾರೆ. ಈ ಎರಡೂ ಭಾಗಗಳಲ್ಲಿನ ಭೌಗೋಲಿಕ, ಆರ್ಥಿಕ ಹಾಗು ಸಾಮಾಜಿಕ ಸ್ಥಿತಿಗಳೂ ಬೇರೆಯೇ ಆಗಿದ್ದವು. "To be out of sight is to be out of mind" ಎನ್ನುವಂತೆ ಪಶ್ಚಿಮ ಪಾಕಿಸ್ತಾನ ಹಾಗು ಪೂರ್ವ ಪಾಕಿಸ್ತಾನ

ಗಳ ನಡುವೆ ಮೊದಲಿನಿಂದಲೂ ತಾವೆಲ್ಲರೂ ಒಂದೇ ರಾಷ್ಟ್ರದ ಪ್ರಜೆಗಳು, ಒಂದೇ ನೆಲ-ಜಲ ಹಾಗೂ ಸಂಸ್ಕೃತಿಯ ಪ್ರತೀಕಗಳೆಂಬ ಭಾವನೆ ಬೆಳೆಯಲು ಸಾಧ್ಯವಾಗಲಿಲ್ಲ. ಪಾಕಿಸ್ತಾನದ ಉದಯವಾದಂದಿನಿಂದ ಇಡೀ ೨೪ ವರ್ಷಗಳ ಅವಧಿಯಲ್ಲಿ ರಾಷ್ಟ್ರೀಯ ಸಮಗ್ರತೆಯನ್ನುಂಟುಮಾಡುವಂತಹ ವಿಶೇಷ ಪ್ರಯತ್ನಗಳನ್ನು ಮಾಡಲಿಲ್ಲ. ಅದಕ್ಕೆ ಬದಲಾಗಿ ಪಶ್ಚಿಮ ಪಾಕಿಸ್ತಾನದವರು ಪೂರ್ವ ಪಾಕಿಸ್ತಾನವನ್ನು ತಮ್ಮ ವಸಾಹತುವನ್ನಾಗಿ ಪರಿಗಣಿಸಿ ಅಲ್ಲಿನ ವಿಪುಲ ಸಂಪತ್ತನ್ನು ತಮ್ಮ ಸ್ವಾರ್ಥಕ್ಕಾಗಿ ದೋಚುತ್ತಾ ನಡೆದರು. ೨೪ ವರ್ಷಗಳು ಅವ್ಯಾಹತವಾಗಿ ನಡೆದ ಈ ಆರ್ಥಿಕ ಶೋಷಣೆಯನ್ನು ಬೇರೊಂದು ಅಧ್ಯಾಯದಲ್ಲಿ ವಿವೇಚಿಸಲಾಗುವದು.

ಮೇಲಾಗಿ ಪಾಕಿಸ್ತಾನವು ಜನಿಸಿದಾಗಿನಿಂದಲೂ ಅಲ್ಪಸಂಖ್ಯಾಕರಾದ ಪಶ್ಚಿಮ ಪಾಕಿಸ್ತಾನದವರು ಬಹುಸಂಖ್ಯಾಕರಾದ ಪೂರ್ವ ಪಾಕಿಸ್ತಾನದವರ ಮೇಲೆ ರಾಜಕೀಯ ಹತೋಟಿಯನ್ನಿಟ್ಟುಕೊಂಡುಬಂದುದಲ್ಲದೆ ಉನ್ನತ ಅಧಿಕಾರದಲ್ಲಿ. ನಾಗರಿಕ ಸೇವಾ ವರ್ಗಗಳಲ್ಲಿ, ಮಿಲಿಟರಿ ಪಡೆಗಳಲ್ಲಿ ಪೂರ್ವದವರಿಗೆ ಸಾಕಷ್ಟು ಪ್ರಾತಿನಿಧ್ಯವಿಲ್ಲದಂತೆ ಮಾಡಿದರು. ಪಾಕಿಸ್ತಾನದ ಜನಸಂಖ್ಯೆ ಮತ್ತು ವಿಸ್ತೀರ್ಣವನ್ನು ಗಣನೆಗೆ ತೆಗೆದುಕೊಂಡರೆ ಈ ವಿಷಯ ಸ್ಪಷ್ಟವಾಗುತ್ತದೆ.

| | ಪಶ್ಚಿಮಪಾಕಿಸ್ತಾನ | ಪೂರ್ವಪಾಕಿಸ್ತಾನ | ಒಟ್ಟು |
|---|---|---|---|
| ವಿಸ್ತೀರ್ಣ | ಚ. ಮೈ.<br>೩೧೦. ೪೦೩ | ಚ. ಮೈ.<br>೫೫, ೧೨೬ | ಚ. ಮೈ.<br>೩೬೫, ೫೨೯ |
| ಜನಸಂಖ್ಯೆ | ೪೨,೮೮೦.೩೭೮ | ೫೦,೮೪೦,೨೩೫ | ೯೩,೭೨೦,೬೧೩ |
| ಜನ ಸಾಂದ್ರತೆ | ಒಂದು ಚ.ಮೈಲಿಗೆ<br>೧೩೮ | ಒಂದು ಚ.ಮೈಲಿಗೆ<br>೯೨೨ | — |

(೧೯೬೧ ರ ಜನಗಣತಿಯು ಆಧಾರ)

ಈ ಅಂಕಿ ಸಂಖ್ಯೆಗಳೇ ತೋರಿಸಿಕೊಡುವಂತೆ ಪಾಕಿಸ್ತಾನದ ಎರಡು ವಿಭಾಗಗಳ ನಡುವೆ ಜನಸಂಖ್ಯೆ, ವಿಸ್ತೀರ್ಣ ಮತ್ತು ಜನ ಸಾಂದ್ರತೆಯಲ್ಲಿ ತಾರತಮ್ಯವಿದ್ದು ಪೂರ್ವಪಾಕಿಸ್ತಾನದಲ್ಲಿ ಒಟ್ಟು ಪಾಕಿಸ್ತಾನದ ಜನಸಂಖ್ಯೆಯಲ್ಲಿನ ಶೇಕಡ ೫೪ ರಷ್ಟು ಜನರು ವಾಸಿಸುತ್ತಿದ್ದು ಉಳಿದ ಶೇಕಡ ೪೬ ರಷ್ಟು ಜನಸಂಖ್ಯೆ ಪಶ್ಚಿಮ ದಲ್ಲಿದೆ. ಮತ್ತು ಪಶ್ಚಿಮದ ಭೂ ವಿಸ್ತೀರ್ಣ ಹೆಚ್ಚಿದ್ದು ಪೂರ್ವ ಪಾಕಿಸ್ತಾನದ ವಿಸ್ತೀರ್ಣ ಕಡಿಮೆ ಇದೆ. ಆದ್ದರಿಂದಲೇ ಪೂರ್ವ ದಲ್ಲಿ ಜನಸಾಂದ್ರತೆ ದೃಷ್ಟಿಯಿಂದ ಪ್ರತಿ ಚದುರ ಮೈಲಿಗೆ ೯೨೨

ಜನರಿದ್ದರೆ ಪಶ್ಚಿಮದಲ್ಲಿ ಕೇವಲ ೧೩೮ ಜನರು ಇದ್ದಾರೆ. ೧೯೭೧ ರ ಹೊತ್ತಿಗೆ ಒಟ್ಟು ಜನಸಂಖ್ಯೆಯಲ್ಲಿ ಹೆಚ್ಚಳ ಕಂಡು ಬಂದಿದ್ದು ಪಶ್ಚಿಮದಲ್ಲಿ ೫೫ ದಶಲಕ್ಷ ಹಾಗೂ ಪೂರ್ವದಲ್ಲಿ ೭೫ ದಶಲಕ್ಷ ಜನರಿದ್ದು ಒಟ್ಟು ಜನಸಂಖ್ಯೆ ೧೩೦ ದಶದಲಕ್ಷ ಗಳಷ್ಟಾಗಿದೆ. ಆದಾಗ್ಯೂ ಪೂರ್ವ ಪಾಕಿಸ್ತಾನದ ಜನಸಂಖ್ಯೆ ಪ್ರಮಾಣವೇ ಹೆಚ್ಚಾಗಿದೆ.

ಇದೂ ಅಲ್ಲದೆ ಪೂರ್ವ ಪಾಕಿಸ್ತಾನವು ಬಂಗಾಲಿಗಳ ಪ್ರಾಂತ್ಯ ವಾಗಿರುವದರಿಂದ ಇಲ್ಲಿಯ ಜನರಲ್ಲಿ ಸಾಂಸ್ಕೃತಿಕ ಸಮಗ್ರತೆ ಇದೆ. ಹಿಂದೂಗಳೇ ಆಗಿರಲಿ, ಯಾವ ಜನಾಂಗದವರೇ ಆಗಿರಲಿ ಅವರಲ್ಲಿ ಸಾಂಸ್ಕೃತಿಕ ಸಾಮರಸ್ಯ ಬೆಳೆದುಬಂದಿದೆ. ಅವರೆಲ್ಲರೂ ಒಂದೇ ಬಂಗಾಲೀ ಭಾಷೆಯನ್ನಾಡುತ್ತಾರೆ, ಉಡಿಗೆತೊಡಿಗೆಗಳು ಒಂದೇ. ಹಬ್ಬ ಹರಿದಿನಗಳನ್ನು ಎಲ್ಲ ಧರ್ಮದವರೂ ಕೂಡಿ ಆಚರಿಸುತ್ತಾರೆ. ಸುಪ್ರಸಿದ್ಧ ಬಂಗಾಲೀ ಕವಿಪುಂಗವ ರವೀಂದ್ರ ನಾಥ ಟಾಗೋರರು ಹಿಂದೂಗಳಿಗೆಷ್ಟು ಶ್ರೇಷ್ಠರೋ ಮುಸ್ಲಿ ಮರಿಗೂ ಅಷ್ಟೇ ಶ್ರೇಷ್ಠರಾಗಿದ್ದಾರೆ. ಬಂಗ್ಲಾದೇಶದ ವಿಮೋ ಚನೆಯ ಕಾಲಕ್ಕೆ ಈ ಕವಿವಾಣಿ ಸ್ಫೂರ್ತಿದಾಯಕವಾಗಿತ್ತು. ಮತ್ತು ಈ ಕವಿಯ ಗೀತೆಯೇ ನವೋದಿತ ಸ್ವತಂತ್ರ ಬಂಗ್ಲಾ ದೇಶದ ರಾಷ್ಟ್ರಗೀತೆಯಾಗಿದೆ. ಆದ್ದರಿಂದಲೇ ಗಾಂಧೀಜಿಯ ವರು ಬಂಗಾಲದ ಹಿಂದೂ-ಮುಸ್ಲಿಮರನ್ನು ನೋಡಿದಾಗ ಯಾರು ಹಿಂದು ಯಾರು ಮುಸ್ಲಿಂ ಎಂದು ಗುರುತು ಹಿಡಿ ಯಲು ಸಾಧ್ಯವಾಗುವದಿಲ್ಲ ಎಂದು ಒಮ್ಮೆ ಉದ್ಗಾರ ತೆಗೆ ದಿದ್ದರು. ಅವರೆಲ್ಲರೂ ಒಂದೇ ಕುಲ ಹಾಗೂ ಬುಡಕಟ್ಟಿಗೆ

ಸೇರಿದವರಾಗಿ ಕಾಣಿಸುತ್ತಾರೆ. ಆದರೆ ಪಶ್ಚಿಮ ಪಾಕಿಸ್ತಾನ ದಲ್ಲಿ ಈ ಸಮಗ್ರತೆ ಕಂಡುಬರುವದಿಲ್ಲ. ಪಶ್ಚಿಮ ಪಾಕಿಸ್ತಾನವು ಪಶ್ಚಿಮ ಪಂಜಾಬ, ಸಿಂಧ್.ಬಲೂಚಿಸ್ತಾನ, ವಾಯುವ್ಯ ಸರಹದ್ದು ಪ್ರಾಂತ್ಯದಿಂದ ಕೂಡಿದ್ದಾಗಿದೆ. ಇವೆಲ್ಲವೂ ಹೇಗೆ ಬೇರೆ ಆಡಳಿತ ಪ್ರಾಂತ್ಯಗಳಾಗಿವೆಯೋ ಹಾಗೆಯೇ ಭಾಷೆ, ಸಂಸ್ಕೃತಿ ಮುಂತಾದವುಗಳಿಂದಲೂ ಭಿನ್ನವಾಗಿವೆ. ಇವರೆಲ್ಲರೂ ಮುಸ್ಲಿಂ ರಾಗಿರುವುದೊಂದೇ ಸಾಮಾನ್ಯ ಅಂಶವಾಗಿದೆ. ಇಂದು ಪಾಕಿಸ್ತಾನವು ಇಬ್ಭಾಗವಾಗಿದ್ದು ಉಳಿದಿರುವ ಪಶ್ಚಿಮ ಪಾಕಿಸ್ತಾನ ದಲ್ಲಿಯೂ ಕೂಡ ಈ ಭಿನ್ನ ಪ್ರಾಂತ್ಯಗಳು ಒಡೆದುಹೋಗುವ ಸಾಧ್ಯತೆಯನ್ನು ಅಲ್ಲಗಳೆಯಲಾಗದು. ಬಲೂಚಿಯವರು, ವಾಯುವ್ಯ ಗಡಿನಾಡಿನವರು ಅಪಘಾನಿಸ್ತಾನದೊಡನೆ ಸೇರಿದರೆ ಆಶ್ಚರ್ಯವೇನಿಲ್ಲ. ಗಡಿನಾಡು ಗಾಂಧಿ ಎಂದು ಹೆಸರಾಗಿರುವ ಅಪ್ಪಟ ಗಾಂಧಿ ಅನುಯಾಯಿ ಖಾನ್ ಅಬ್ದುಲ್ ಗಫಾರಖಾನರು ಈಗ ಅಫಘಾನಿಸ್ತಾನದಲ್ಲಿ ಆಶ್ರಯ ಪಡೆದಿರುವುದನ್ನು ಇಲ್ಲಿ ನೆನೆಯಬಹುದು. ಅವರ ಪುತ್ರ ಖಾನ್ ವಾಲಿಖಾನರು 'ರಾಷ್ಟ್ರೀಯ ಅವಾಮಿ ಪಕ್ಷದ' ನಾಯಕರಾಗಿದ್ದು, ಈ ಪಕ್ಷವು ಗಡಿನಾಡಿನಲ್ಲಿ ಬಲಯುತವಾದ ಪಕ್ಷವಾಗಿದೆ. ಜ॥ ಯಾಹ್ಯಾಖಾನರು ಈ ಪಕ್ಷ ವನ್ನು ಬಹಿಷ್ಕರಿಸಿದ್ದರು. ಇದೂ ಅಲ್ಲದೆ ಝುಲಫಿಕರ್ ಆಲಿ ಭುಟ್ಟೋರವರು ರಾಷ್ಟ್ರಾಧ್ಯಕ್ಷರಾದ ಕೆಲವೇ ದಿನಗಳಲ್ಲಿ ಅಫಘಾನಿಸ್ತಾನಕ್ಕೆ ಇತ್ತ ಕೆಲಗಂಟೆಗಳ ಆಕಸ್ಮಿಕ ಭೆಟ್ಟಿಯನ್ನು ಇಲ್ಲಿ ನೆನೆಯಬಹುದು. ಹೀಗೆ ಅಳಿದುಳಿದ ಪ. ಪಾಕಿಸ್ತಾನದಲ್ಲಿ ಯಾವ ಒಮ್ಮತವೂ ಇಲ್ಲ. ಆದರೆ ಅದೇ ಪೂರ್ವ ಪಾಕಿಸ್ತಾನದಲ್ಲಿ ಸಮಗ್ರ

ಇರುವುದರಿಂದಲೇನೆ ಅವರು ಪಾಕಿಸ್ತಾನದ ಸೈನಿಕ ದಬ್ಬಾಳಿಕೆ ಅತ್ಯಾಚಾರಗಳ ವಿರುದ್ಧ ಬಂಡೆದ್ದು ತಮ್ಮ ನಾಡಿನ ಸ್ವಾತಂತ್ರ್ಯವನ್ನು ಗಳಿಸಲು ಸಾಧ್ಯವಾಯಿತು. ಹೊರಗಿನ ಸಹಾಯ ಎಷ್ಟೇ ಇದ್ದರೂ ಅವರ ಸ್ವಶಕ್ತಿ, ಉತ್ಸಾಹ, ಐಕ್ಯತೆ ಮತ್ತು ದೇಶಪ್ರೇಮ ಇವು ಗೆಲುವಿಗೆ ಮುಖ್ಯ ಕಾರಣಗಳೆನಿಸಿದುವು.

೪

# ರಾಜಕೀಯ ಅಸ್ಥಿರತೆ

ಪಾಕಿಸ್ತಾನದ ಇನ್ನೊಂದು ಮೂಲ ಕೊರತೆ ಎಂದರೆ ಅಲ್ಲಿಯ ರಾಜಕೀಯ ಅಸ್ಥಿರತೆ ಮತ್ತು ಸರಕಾರದ ಅನಿಶ್ಚಿತತೆ. ಯಾವುದೇ ರಾಷ್ಟ್ರದಲ್ಲಿ ಸ್ವಾತಂತ್ರ್ಯ, ಶಿಸ್ತು, ಆರ್ಥಿಕ ಪ್ರಗತಿ ನೆಲೆಸಬೇಕಾದರೆ ರಾಜಕೀಯ ಸ್ಥಿರತೆ ಮತ್ತು ಭದ್ರ ಸರಕಾರ ಇರುವದು ಅವಶ್ಯ. ಇವುಗಳ ಅಭಾವವಿದ್ದಲ್ಲಿ ಯಾವ ಪ್ರಗತಿಯೂ ಸಾಧ್ಯವಾಗುವದಿಲ್ಲ. ಅಷ್ಟೇ ಏಕೆ ಅಂತಹ ರಾಷ್ಟ್ರ ತಿಕ್ಕಾಟ, ಒಳಜಗಳ, ಕಲಹ, ಕೋಲಾಹಲ ಮುಂತಾದ ಅನಿಷ್ಟ ಪರಂಪರೆಗಳ ತೌರಾಗುವದು. ಪಾಕಿಸ್ತಾನದಲ್ಲಿ ಕಳೆದ ಇಪ್ಪತ್ನಾಲ್ಕು ವರ್ಷಗಳ ಅವಧಿಯಲ್ಲಿ ಯಾವ ಕಾಲದಲ್ಲಿಯೂ ಸುಭದ್ರ ಸರಕಾರವಿಲ್ಲದಿರುವದು ಎಲ್ಲರಿಗೂ ತಿಳಿದ ವಿಷಯ. ಇದಕ್ಕೆ ದಕ್ಷ ನಾಯಕತ್ವದ ಅಭಾವವೂ ಕಾರಣ.

ತನ್ನೊಡನೆಯೇ ಸ್ವತಂತ್ರವಾದ ನೆರೆರಾಷ್ಟ್ರ ಭಾರತದಲ್ಲಿ ಮೊದಲಿನಿಂದಲೂ ಪ್ರಜಾಸತ್ತಾತ್ಮಕ ಸರಕಾರ ರಚಿತವಾಗಿದ್ದಿ. ಜವಾಹರಲಾಲ ನೆಹರೂರವರು ಪ್ರಥಮ ಪ್ರಧಾನಿಯಾಗಿ ಅಖಂಡ ಹದಿನೆಂಟು ವರುಷ ಅಧಿಕಾರದಲ್ಲಿದ್ದು ತಮ್ಮ ಜನತೆಗೆ, ರಾಷ್ಟ್ರಕ್ಕೆ ದಕ್ಷ ನಾಯಕತ್ವ, ಸುಭದ್ರ ಸರಕಾರ ಮತ್ತು ಸುಭಿಕ್ಷತೆಯನ್ನು ಒದಗಿಸಿಕೊಟ್ಟರು. ಭಾರತದಲ್ಲಿ ಪ್ರಜಾಪ್ರಭುತ್ವ ಸ್ಥಾಪಿತವಾಗಿದ್ದು ಇಂದೂ ಕೂಡ ಪ್ರಜಾಪ್ರಭುತ್ವ ತತ್ವಗಳಿಗನು

ಗುಣವಾಗಿ ಸರಕಾರ ರಚಿತವಾಗಿದ್ದು ಸಂಸದೀಯ ಪದ್ಧತಿ ಯಶ ಸ್ವಿಯಾಗಿ ಕೆಲಸ ಮಾಡುತ್ತಿದೆ. ೧೯೫೦ ರ ಜನೆವರಿ ೨೬ ರಂದು ಭಾರತದ ಸಂವಿಧಾನ ಜಾರಿಗೆ ಬಂದಿತು. ಜನತೆಯ ಪ್ರತಿನಿಧಿ ಗಳಿಂದ ಸಂವಿಧಾನ ರಚನೆಯ ಕಾರ್ಯ ಸುಗಮವಾಗಿ ಸಾಗಿತು. ಅದೇ ಸಂವಿಧಾನ ಅವಶ್ಯವೆನಿಸಿದ ಬದಲಾವಣೆಗಳೊಂದಿಗೆ ಇಂದೂ ಅಸ್ತಿತ್ವದಲ್ಲಿದೆ. ಇದುವರೆಗೆ ಮೂವರು ಪ್ರಧಾನಿಗಳು ಮತ್ತು ನಾಲ್ಕು ಜನ ರಾಷ್ಟ್ರಾಧ್ಯಕ್ಷರು ಅಧಿಕಾರ ನಡೆಸಿದ್ದಾರೆ. ಇಷ್ಟೆಲ್ಲಾ ಶಾಂತಿಯುತ ಮತ್ತು ಪ್ರಜಾಪ್ರಭುತ್ವದ ಮಾರ್ಗ ದಲ್ಲಿಯೇ ಆಗಿರುವದು ಹೆಮ್ಮೆಯ ವಿಷಯ. ಸಂವಿಧಾನದನ್ವಯ ಐದು ವರುಷಗಳಿಗೊಮ್ಮೆ ಪ್ರಪಂಚದಲ್ಲಿಯೇ ಬೃಹತ್ ಪ್ರಮಾ ಣದ ಚುನಾವಣೆಗಳು ಕೇಂದ್ರ ಹಾಗೂ ರಾಜ್ಯ ಶಾಸನಸಭೆಗಳ ಪ್ರತಿನಿಧಿಗಳನ್ನು ಆರಿಸಲು ನಡೆಯುತ್ತವೆ. ಇದುವರೆಗೆ ಐದು ಸಾರ್ವತ್ರಿಕ ಚುನಾವಣೆಗಳು, ಅನೇಕ ಮಧ್ಯಕಾಲೀನ ಹಾಗೂ ಉಪಚುನಾವಣೆಗಳು ಶಾಂತಿಯಿಂದ ಜರುಗಿವೆ. ಏಶಿಯಾದಲ್ಲಿಯೇ ಇದೊಂದು ಬೃಹತ್ ಪ್ರಯೋಗವಾಗಿದೆ. ಇದೇ ರೀತಿ ಆರ್ಥಿಕ ರಂಗದಲ್ಲಿ ನಾಲ್ಕು ಪಂಚವಾರ್ಷಿಕ ಯೋಜನೆಗಳ ಮುಖಾಂತರ ಗಣನೀಯ ಅಭಿವೃದ್ಧಿಯಾಗಿದ್ದು ಜನಜೀವನಮಟ್ಟ ಹೆಚ್ಚಿ ಆಹಾರ ಕ್ಷೇತ್ರದಲ್ಲಿ ಸ್ವಾವಲಂಬನೆಯನ್ನು ಸಾಧಿಸಲಾಗಿದೆ. ಇಷ್ಟೆಲ್ಲ ಪ್ರಗತಿ ಶಾಂತಿಯುತ ಮತ್ತು ಪ್ರಜಾಸತ್ತಾತ್ಮಕ ಮಾರ್ಗದಲ್ಲಿಯೇ ಆಗಿರುವದು ಭಾರತದ ವೈಶಿಷ್ಟ್ಯ.

ಆದರೆ ಪಾಕಿಸ್ತಾನದಲ್ಲಿ ಮಾತ್ರ ಇಂತಹ ಯಾವ ಪ್ರಗತಿಯೂ ಕಂಡುಬಂದಿಲ್ಲ. ಇದೇ ಅವಧಿಯಲ್ಲಿ ಪಾಕಿಸ್ತಾನದ ಆಳರಸರಲ್ಲಿ

ಅಧಿಕಾರಕ್ಕಾಗಿ ನಡೆದ ಆಂತರಿಕ ತಿಕ್ಕಾಟದಿಂದಾಗಿ ಅಲ್ಲಿ ಯಾವ ಕಾಲದಲ್ಲಿಯೂ ಸುಭದ್ರ ಸರಕಾರ ಸ್ಥಾಪಿತವಾಗಿಲ್ಲ. ಪ್ರಜಾಸತ್ತೆಯಂತೂ ಅಲ್ಲಿ ಎಂದೋ ಸಮಾಧಿಯಾಯಿತು. ಈ ಇಪ್ಪತ್ನಾಲ್ಕು ವರುಷಗಳ ಅವಧಿಯಲ್ಲಿ ಐದು ಜನ ಅಧ್ಯಕ್ಷರಾಗಿಹೋದರು. ಮತ್ತು ಏಳು ಜನ ಪ್ರಧಾನಿಗಳು ಆಳಿದರು. ಮಹಮ್ಮದಾಲಿ ಜಿನ್ನಾರವರು ಪ್ರಥಮ ಗವ್ಹರ್ನರ ಜನರಲ್‌ರಾದರು. ಅವರ ನಂತರ ಖ್ವಾಜಾ ನಾಜೀಮುದ್ದೀನ, ಗುಲಾಮ್ ಮಹಮ್ಮದ, ಇಸ್ಕಂದರ್ ಮಿರ್ಜಾ ಗವ್ಹರ್ನರ್ ಜನರಲ್‌ರಾಗಿದ್ದರೆ, ಫೀಲ್ಡ್ ಮಾರ್ಶಲ್ ಅಯೂಬಖಾನ್ ಮತ್ತು ಜ॥ ಯಾಹ್ಯಾಖಾನರು ಮಿಲಿಟರಿ ಸರ್ವಾಧಿಕಾರಿಗಳಾಗಿ ಅಧಿಕಾರ ನಡೆಸಿದರು. ಈಗ ಝಡ್. ಎ. ಭುಟ್ಟೋರವರು ಅಧ್ಯಕ್ಷರಾಗಿ ಅಧಿಕಾರಕ್ಕೆ ಬಂದಿದ್ದಾರೆ. ಇವರಲ್ಲಿ ಯಾರೊಬ್ಬರೂ ಪ್ರಜಾಪ್ರಭುತ್ವ ತತ್ವಕ್ಕನುಗುಣವಾಗಿ ಆರಿಸಿ ಬಂದವರಲ್ಲ. ಅಯೂಬಖಾನರು' ತಮ್ಮ ಸರ್ವಾಧಿಕಾರದ ಅವಧಿಯಲ್ಲಿ ತಮ್ಮದೇ ಆದ ರೀತಿಯಲ್ಲಿ ಪಾಕಿಸ್ತಾನದ ಜನತೆಗೆ "ಮೂಲ ಪ್ರಜಾಪ್ರಭುತ್ವ" (Basic Democracy) ವನ್ನು ಒದಗಿಸಿ. ಹತ್ತು ಕೋಟಿಗಿಂತಲೂ ಹೆಚ್ಚು ಜನಸಂಖ್ಯೆಯುಳ್ಳ ಇಡೀ ಪಾಕಿಸ್ತಾನದಾದ್ಯಂತ ಕೇವಲ ಎಂಭತ್ತು ಸಾವಿರ (೮೦,೦೦೦) ಜನ ಮೂಲ ಮತದಾರರಿಗೆ ರಾಷ್ಟ್ರದ ಅಧ್ಯಕ್ಷರನ್ನು ಆರಿಸುವಂತೆ ತಿಳಿಸಲಾಯಿತು. ಇವರಲ್ಲಿ ಐವತ್ತು ಸಾವಿರ (೫೦,೦೦೦) ಮತದಾರರು ಅಯೂಬಖಾನರಿಗೆ ಮತವಿತ್ತು ಅವರ ಎದುರಾಳಿಯಾದ ಮಿಸ್ ಫಾತಿಮಾ ಜಿನ್ನಾರವರನ್ನು ಸೋಲಿಸಿದರು. ಈ ರೀತಿ ಅಯೂಬಖಾನರು ಪ್ರಥಮ ಚುನಾ

ಯಿತ ಸರ್ವಾಧಿಕಾರಿಯಾದರು. ಇದೆಂತಹ ಚುನಾವಣೆ? ಎಂತಹ ಪ್ರಜಾಸತ್ತೆ? ಇದು ಪ್ರಜಾಪ್ರಭುತ್ವದ ವಿಪರ್ಯಾಸವೆನಿಸಿತು. ಇಡೀ ಒಂದು ದಶಕದ ಸರ್ವಾಧಿಕಾರಿ ಆಡಳಿತದ ನಂತರ ಅಯೂಬಖಾನರು ಪೂರ್ವ ಪಾಕಿಸ್ತಾನದ ಸ್ವಾಯತ್ತತೆಯ ಚಳುವಳಿಯ ತೀವ್ರತೆ ಯಿಂದಾಗಿ ೧೯೬೯ ರಲ್ಲಿ ಅಧಿಕಾರ ತ್ಯಜಿಸಿ ಜ॥ ಯಾಹ್ಯಾಖಾನ ರಿಗೆ ಅಧಿಕಾರ ವಹಿಸಿಕೊಟ್ಟರು. ಜ॥ ಯಾಹ್ಯಾಖಾನರು ಜನ ತೆಯಿಂದ ಚುನಾಯಿತರಾದ ಪ್ರತಿನಿಧಿಗಳಿಗೆ ಅಧಿಕಾರ ಹಸ್ತಾಂತರ ಮಾಡುವದೇ ತಮ್ಮ ಆಡಳಿತದ ಗುರಿಯಾಗಿದೆಯೆಂದು ಸಾರಿ ಮರುವರುಷವೇ ಜರುಗಿದ ಚುನಾವಣೆಯ ಫಲಿತಾಂಶದಿಂದ ದಿಂಙ್ಮೂಢರಾಗಿ ಪುನಃ ಮಿಲಿಟರಿ ಅಧಿಕಾರಕ್ಕೆ ಶರಣುಹೋಗಿ ಪೂರ್ವ ಪಾಕಿಸ್ತಾನದಲ್ಲಿ ೯ ತಿಂಗಳ ಅವ್ಯಾಹತ ನರಮೇಧ ಜರುಗಿಸಿದರಲ್ಲದೇ, ನೆರೆಯ ರಾಷ್ಟ್ರವಾದ ಭಾರತದ ಮೇಲೆ ೧೯೭೧ ರ ಡಿಶಂಬರ ೩ ರಂದು ಸಂಜೆ ವಿಮಾನದಾಳಿ ಮಾಡಿ ಯುದ್ಧ ಸಾರಿದರು. ಕೇವಲ ೧೪ (ಹದಿನಾಲ್ಕು) ದಿನಗಳು ಜರುಗಿದ ಈ ಯುದ್ಧದಲ್ಲಿ ಪಾಕಿಸ್ತಾನವು ಪೂರ್ವ ಬಂಗಾಲದ ಲ್ಲಿಯ ಭಾರತೀಯ ಸೈನ್ಯ ಮತ್ತು ಮುಕ್ತಿವಾಹಿನಿಗೆ ಶರಣಾಗತ ವಾಯಿತಲ್ಲದೆ, ಪಶ್ಚಿಮ ರಂಗದಲ್ಲಿಯೂ ಕೂಡ ಸೋಲನ್ನು ಅನು ಭವಿಸಿತು. ಡಿಶಂಬರ ೧೬ ರಂದು ಪಾಕಿಸ್ತಾನದ ಲೆ॥ ಜ॥ ಎ. ಎ. ಕೆ. ನಿಯಾಝಿಯವರು ಭಾರತದ ಲೆ॥ಜ॥ ಜಗಜೀತ್‌ಸಿಂಗ ಅರೋರಾರವರಿಗೆ ತಮ್ಮ ಸುಮಾರು ೯೦,೦೦೦ ಸೈನ್ಯದೊ ಡನೆ ಶರಣಾಗತರಾಗಿ ಶಸ್ತ್ರವನ್ನು ಕೆಳಗಿಟ್ಟರು. ಈ ಮಿಲಿಟರಿ

ಸೋಲಿನಿಂದಾಗಿ ಜ॥ ಯಾಹ್ಯಾಖಾನರು ಭುಟ್ಟೋರವರಿಗೆ ಅಧಿಕಾರ ವಹಿಸಿಕೊಟ್ಟು ಈಗ ಗೃಹಬಂಧನದಲ್ಲಿದ್ದಾರೆ.

ಇನ್ನು ಪ್ರಧಾನ ಮಂತ್ರಿಗಳ ಬಗ್ಗೆ ಹೇಳುವದಾದರೆ ಪ್ರಧಾನಿ ಲಿಯಾಖತ್ ಅಲಿ ದಕ್ಷರಾದವರು. ಜನಪ್ರಿಯತೆಯನ್ನು ಹೊಂದಿದ್ದವರು. ಜಿನ್ನಾ ಮತ್ತು ಲಿಯಾಖತ್ ಅಲಿಯವರ ವೈಯಕ್ತಿಕ ಪ್ರಭಾವದಿಂದ ಈ ವಿಭಿನ್ನ ಜನರ ರಾಷ್ಟ್ರ ಒಂದಾಗಿ ಮುಂದುವರೆಯಿತು. ೧೯೪೮ ರಲ್ಲಿ ಜನ್ನಾರವರ ನಿಧನದಿಂದ ಈ ಪ್ರಯತ್ನಕ್ಕೆ ಪ್ರಥಮ ಆಘಾತ ಉಂಟಾಯಿತು. ಅಕ್ಟೋಬರ ೧೬. ೧೯೫೧ ರಂದು ಪ್ರಧಾನಿ ಲಿಯಾಖತ ಅಲಿಖಾನರ ಕೊಲೆಯಾಯಿತು. ಇದರಿಂದ ದೇಶದಾದ್ಯಂತ ಅರಾಜಕತೆ ಉಂಟಾಯಿತು. ಅಂದಿನಿಂದ ಜರುಗಿದ ಘಟನೆಗಳು ಪಾಕಿಸ್ತಾನ ಸರಕಾರದ ಭದ್ರತೆಗೆ ಎರವಾಗಿ ಕೊನೆಗೆ ಮಿಲಿಟರಿ ಸರ್ವಾಧಿಕಾರದ ಸ್ಥಾಪನೆಯಲ್ಲಿ ಪರ್ಯವಸನಗೊಂಡಿತು.

ಈ ವಿವರಣೆಯಿಂದ ವ್ಯಕ್ತವಾಗುವ ಮುಖ್ಯ ಅಂಶವೆಂದರೆ: ಪಾಕಿಸ್ತಾನ ರಾಷ್ಟ್ರವು ಒಂದು ಸುವ್ಯವಸ್ಥಿತ ರಾಜಕೀಯ ವ್ಯವಸ್ಥೆಯ ಮೇಲೆ ನಿರ್ಮಿತವಾಗಿರದೇ ಮೊದಲಿನಿಂದಲೂ ವ್ಯಕ್ತಿಗಳ ಪ್ರಭಾವ ಮತ್ತು ಕೈವಾಡದ ಮೇಲೆ ಅವಲಂಬಿತವಾಗಿದ್ದುದು. ಇದಕ್ಕೆ ಮೂಲಕಾರಣವೆಂದರೆ ಪಾಕಿಸ್ತಾನದಲ್ಲಿ ತನ್ನದೇ ಆದ ಸಂವಿಧಾನವು ರಚಿತವಾಗದಿದ್ದುದು. ರಾಷ್ಟ್ರದ ಎರಡು ಭಾಗಗಳ ನಡುವೆ ಹಾಗೂ ಕೇಂದ್ರ ಮತ್ತು ಪ್ರಾಂತ್ಯಗಳ ನಡುವೆ ಯಾವ ರೀತಿಯ ಸಂಬಂಧಗಳಿರಬೇಕು ? ಪಾಕಿಸ್ತಾನ ಒಕ್ಕೂಟದ ಸ್ವರೂಪವೇನಿರಬೇಕು? ಪ್ರಾಂತ್ಯಗಳಿಗೆ ಯಾವ ರೀತಿ ಪ್ರಾತಿನಿಧ

ಕೊಡಬೇಕು. ಸದಸ್ಯರ ಸಂಖ್ಯೆಯನ್ನು ಹೇಗೆ ನಿಗದಿಗೊಳಿಸ ಬೇಕು? ರಾಷ್ಟ್ರದ ಅಧಿಕೃತ ಭಾಷೆ ಯಾವದು? ಮುಂತಾದ ಪ್ರಶ್ನೆಗಳನ್ನು ಸುಲಲಿತವಾಗಿ ಬಿಡಿಸಲಾರದೇ ಹೋದ ಕಾರಣ ಸಂವಿಧಾನದ ರಚನೆಯನ್ನು ಮುಂದೂಡುತ್ತಾ ಹೋದರು. ಸಂವಿಧಾನದ ರಚನೆಯಲ್ಲಿ ವಿಳಂಬವಾಗುವದಕ್ಕೆ ಪಾಕಿಸ್ತಾನದಲ್ಲಿನ ಧರ್ಮಗುರುಗಳಾದ "ಉಲೇಮಾ" ಗಳಲ್ಲಿ ಇಸ್ಲಾಂ ರಾಜ್ಯದ ಮೂಲತತ್ವಗಳ ಬಗ್ಗೆ ಇದ್ದ ಭಿನ್ನಾಭಿಪ್ರಾಯವೂ ಒಂದು ಪ್ರಮುಖ ಕಾರಣವಾಯಿತು. ೧೯೫೦ ರ ಹೊತ್ತಿಗೆ ಸಂವಿಧಾನ ರಚನೆಯ ಪ್ರಯತ್ನಗಳನ್ನು ಮುಂದುವರಿಸಲಾಯಿತಾದರೂ, ಆಗಿನ ಗವರ್ನರ ಜನರಲ್ ಗುಲಾಮು ಮೊಹಮ್ಮದರ ಅಧಿ ಕಾರವನ್ನು ಮೊಟಕುಗೊಳಿಸುವ ಪ್ರಯತ್ನ ನಡೆದಾಗ ಗುಲಾಮ್ ಮೊಹಮ್ಮದರು ಘಟನಾ ಸಮಿತಿಯನ್ನೇ ರದ್ದುಗೊಳಿಸಿದರು. ನಂತರ ಜರುಗಿದ ಘಟನೆಗಳಿಂದಾಗಿ ೧೯೫೫ ರಲ್ಲಿ ಹೊಸ ಘಟನಾ ಸಮಿತಿಯನ್ನು ಕರೆಯಲಾಯಿತು. ೧೯೫೬ ರ ಜನವರಿ ತಿಂಗಳಲ್ಲಿ ಹೊಸ ಸಂವಿಧಾನ ಸಿದ್ಧವಾಯಿತು. . ಆಗ ಇಸ್ಕಂದರ್ ಮಿರ್ಜಾರವರು ಗವರ್ನರ್ ಜನರಲ್‌ರಾಗಿದ್ದರು. ನಂತರ ದೇಶದಾದ್ಯಂತ ಜರುಗಿದ ಘಟನೆಗಳು ಅರಾಜಕತೆಯ ಪರಾಕಾಷ್ಠತೆಯನ್ನು ಮುಟ್ಟಿದವು. ಆಗ ಇಸ್ಕಂದರ್ ಮಿರ್ಜಾ ರವರು ೧೯೫೬ ರ ಸಂವಿಧಾನವನ್ನು ರದ್ದುಗೊಳಿಸಿರುವುದಾಗಿ ಮತ್ತು ಎಲ್ಲಾ ಪ್ರಾಂತೀಯ ಮತ್ತು ಕೇಂದ್ರ ಸರಕಾರಗಳನ್ನು, ರಾಜಕೀಯ ಪಕ್ಷಗಳನ್ನು ರದ್ದುಗೊಳಿಸಿರುವುದಾಗಿ ಸಾರಿ ಅಂದಿನ ಪ್ರಮುಖ ಸೈನ್ಯಾಧಿಕಾರಿ ಅಯೂಬಖಾನರಿಗೆ ಅಧಿಕಾರ ವಹಿಸಿ

ಕೊಟ್ಟರು. ೧೯೬೨ ರಲ್ಲಿ ಅಯೂಬಖಾನರು ಸೈನಿಕ ಆಡಳಿತ ಕೊನೆಗೊಳಿಸಿ ಕೇಂದ್ರ, ಪ್ರಾಂತೀಯ ವಿಧಾನ ಸಭೆಗಳೊಂದಿಗೆ ಅಧ್ಯಕ್ಷೀಯ ಪದ್ಧತಿಯನ್ನು ಹೊಂದಿದ ಸಂವಿಧಾನವನ್ನು ಜಾರಿಗೆ ತಂದರು. ೧೯೬೫ ರಲ್ಲಿ ಅವರೇ ಪುನಃ ಅಧ್ಯಕ್ಷರಾಗಿ ಚುನಾಯಿತರಾದರು. ೧೯೬೨ ರ ನಂತರ ಮುಸ್ಲಿಂ ಲೀಗ್, ಅವಾಮಿ ಲೀಗ್, ರಾಷ್ಟ್ರೀಯ ಅವಾಮಿ ಲೀಗ್ ಮುಂತಾದ ರಾಜಕೀಯ ಪಕ್ಷಗಳು ತಮ್ಮ ಕಾರ್ಯಾಚರಣೆಗಳನ್ನು ಆರಂಭಿಸಿದವು. ೧೯೪೭ ರಿಂದ ೧೯೭೦ ರ ವರೆಗೆ ನಡೆದ ಪ್ರಯತ್ನಗಳನ್ನು ಸಂವಿಧಾನ ರಚನೆಯ ದೃಷ್ಟಿಯಿಂದ ನೋಡಿದಾಗ ಸಂವಿಧಾನವನ್ನು ರಚಿಸುವದರಲ್ಲಿ ವಿಳಂಬ ಹಾಗೂ ಅಡಚಣೆ ಉಂಟಾಗಿದ್ದು ಪಶ್ಚಿಮಕ್ಕಿಂತ ಪೂರ್ವ ಪಾಕಿಸ್ತಾನದವರಿಗೇ ಘಟನಾ ಸಭೆಯಲ್ಲಿ ಹೆಚ್ಚು ಸ್ಥಳಗಳಿದ್ದು ಅವರ ಅಭಿಪ್ರಾಯಗಳಿಗೆ ಮಾನ್ಯತೆ ಕೊಡುವದು ಪಶ್ಚಿಮದವರಿಗೆ ಬೇಕಾಗಿರಲಿಲ್ಲವಾದ್ದರಿಂದಲೇ. ಜ॥ ಯಾಹ್ಯಾ ಖಾನರಾದರೂ ಸಂವಿಧಾನ ರಚಿಸುವದಕ್ಕಾಗಿಯೇ ೧೯೭೦ ರ ಡಿಶಂಬರನಲ್ಲಿ ಚುನಾವಣೆಗಳನ್ನು ನಡೆಸಿದ್ದು. ಆದರೆ ಅವರು ಅವುಗಳ ಫಲಿತಾಂಶವನ್ನು ಮಾನ್ಯ ಮಾಡಲಿಲ್ಲ. ಏಕೆಂದರೆ ಪೂರ್ವ ಪಾಕಿಸ್ತಾನದವರಿಗೇ ರಾಷ್ಟ್ರೀಯ ಅಸೆಂಬ್ಲಿಯಲ್ಲಿ ಹೆಚ್ಚಿನ ಸ್ಥಾನ ದೊರೆತು ಮುಜಿಬುರ್ ನಾಯಕರಾಗುವ ಅರ್ಹತೆಯನ್ನು ಪಡೆದಿದ್ದರು.

ಈ ರಾಜಕೀಯ ತುಮುಲದಲ್ಲಿ ಪ್ರಮುಖ ಪಾತ್ರಧಾರಿಗಳೆಲ್ಲರೂ ಪಶ್ಚಿಮ ಪಾಕಿಸ್ತಾನದವರೇ ಆಗಿದ್ದರು. ಜಿನ್ನಾರವರ ತರುವಾಯ ಗವ್ಹರ್ನರ್ ಜನರಲ್‌ರಾದ ಖ್ವಾಜಾ ನಾಜೀಮು

ದ್ದೀನರು ಮತ್ತು ಪ್ರಧಾನ ಮಂತ್ರಿಗಳಾದ ಮಹಮ್ಮದಲಿ ಬೋಗ್ರಾ ಇವರಿಬ್ಬರು ಮಾತ್ರ ಪೂರ್ವ ಪಾಕಿಸ್ತಾನದರಾಗಿದ್ದರು. ಕರುಣಾಳುವೆಂದು ಹೆಸರಾದ ಖ್ವಾಜಾ ನಾಜೀಮುದ್ದೀನರು ಪೂರ್ವ ಪಾಕಿಸ್ತಾನದ ಹಿತಾಸಕ್ತಿಗಳನ್ನು ರಕ್ಷಿಸಲು ಸಮರ್ಥರಾಗಿರಲಿಲ್ಲ. ನಂತರ ಪ್ರಧಾನಿ ಗುಲಾಮ್ ಮೊಹಮ್ಮದರೆ ಇವರನ್ನು ಕಿತ್ತುಹಾಕಿದರು. ಪಶ್ಚಿಮ ಪಾಕಿಸ್ತಾನದಲ್ಲಿಯೇ ಕೇಂದ್ರ ಸರಕಾರ ಸ್ಥಾಪಿತವಾಗಿದ್ದು ಅದರ ಮೇಲೆ ಪಶ್ಚಿಮ ಪಾಕಿಸ್ತಾನಿಯರೇ, ಅದರಲ್ಲಿಯೂ ಪಂಜಾಬ ಪ್ರಾಂತ್ಯದವರು, ಅಧಿಕಾರವನ್ನು ಹೊಂದುತ್ತಾ ಬಂದಿರುತ್ತಾರೆ. ಇದು ವಸಾಹತು ನೀತಿಯ ಒಂದು ಪ್ರಮುಖ ಲಕ್ಷಣ. ಪೂರ್ವ ಪಾಕಿಸ್ತಾನದವರು ಕೇಂದ್ರದಲ್ಲಿ ಅಧಿಕಾರಕ್ಕೆ ಬರದಂತೆ ನೋಡಿಕೊಳ್ಳಲಾಯಿತು. ತಮಗೆ ಆಡಳಿತ ವರ್ಗ ಮತ್ತು ಸೈನ್ಯದಲ್ಲಿ ಸ್ಥಾನವೇ ಇಲ್ಲದಾದಾಗ ಪೂರ್ವ ಪಾಕಿಸ್ತಾನದವರು ಪಶ್ಚಿಮದ ಈ ನೀತಿಯನ್ನು ಎದುರಿಸಲು ರಾಜಕೀಯ ಮಾರ್ಗವನ್ನನುಸರಿಸಬೇಕಾಯಿತು. ತಮ್ಮದೇ ಆದ ರಾಜಕೀಯ ಪಕ್ಷಗಳ ಬಲಸಂವರ್ಧನೆ ಅವಶ್ಯವೆನಿಸಿತು. ಇದಕ್ಕಾಗಿ ಮುಸ್ಲಿಂ ಲೀಗಿನ ಸ್ಥಾನವನ್ನು ಪೂರ್ವ ಪಾಕಿಸ್ತಾನದಲ್ಲಿ ದುರ್ಬಲಗೊಳಿಸಲು ಬೇಕಾದ ಎಲ್ಲಾ ಪ್ರಯತ್ನಗಳನ್ನು ಮಾಡಲಾಯಿತು. ೧೯೫೪ರ ಚುನಾವಣೆಯಲ್ಲಿ ಮುಸ್ಲಿಂ ಲೀಗಿನ ಪ್ರಭಾವ ಕಡಿಮೆಯಾದದ್ದು ಕಂಡುಬಂದಿತು. ಅವಾಮಿಲೀಗ್ ಮತ್ತು ಕೃಷಕ ಪ್ರಜಾಪಕ್ಷಗಳ ಸಂಯುಕ್ತ ರಂಗಕ್ಕೆ ಪ್ರಚಂಡ ಬಹುಮತ ದೊರೆಯಿತು. ಇಷ್ಟು ಹೊತ್ತಿಗೆ ಅಮೇರಿಕೆ ಮತ್ತು ಇತರ ಪಾಶ್ಚಿಮಾತ್ಯ ರಾಷ್ಟ್ರಗಳು

ಪಶ್ಚಿಮ ಪಾಕಿಸ್ತಾನದಲ್ಲಿ ಮಿಲಿಟರಿ ಆಡಳಿತ ವರ್ಗಕ್ಕೆ ತಮ್ಮ ಸಹಾನುಭೂತಿಯನ್ನು ತೋರಿಸಿ ಮಿಲಿಟರಿ ಮತ್ತು ಆರ್ಥಿಕ ನೆರವನ್ನು ಕೊಡಮಾಡಿದವು. ಇದು ಬಂಗಾಲೇತರರ ಆಡಳಿತದ ಕಪಿಮುಷ್ಟಿಯನ್ನು ಬಲಗೊಳಿಸುವದರಲ್ಲಿ ಸಹಾಯವಾಯಿತು. ಹೆಚ್. ಎಸ್. ಸುಹ್ರಾವರ್ದಿ ಮತ್ತು ಫಜಲುಲ್ ಹಕ್ಕರು ಒಂದಾಗಿ ಮುಸ್ಲಿಂ ಲೀಗಿನ ಪ್ರಭಾವವನ್ನು ತಗ್ಗಿಸಲು ನೆರವಾದರು. ಪೂರ್ವ ಪಾಕಿಸ್ತಾನದ ಕ್ರಾಂತಿಕಾರಿ ನಾಯಕರುಗಳಾದ ಮೌಲಾನಾ ಭಷಾನಿ, ಮುಜಿಬುರ್ ರಹಮಾನ್ ಮತ್ತು ಅತೌಉರ್ ರಹಮಾನರು ಈ ಇಬ್ಬರು ಹಿರಿಯ ನಾಯಕರಿಗೆ ಬೆಂಬಲವಿತ್ತರು. ಅಲ್ಲಿಯವರೆಗೆ ವಿದ್ಯಾರ್ಥಿ ನಾಯಕರಾಗಿದ್ದ ಶೇಖ ಮುಜಿಬುರ್ ರಹಮಾನರು ೧೯೫೪ ರ ಚುನಾವಣೆಗಳಲ್ಲಿ ಬಂಗಾಲದ ಪ್ರಮುಖ ನಾಯಕರಾಗಿ ಬೆಳಕಿಗೆ ಬಂದರು.

೧೯೫೪ ರಲ್ಲಿ ಜರುಗಿದ ಪ್ರಾಂತ್ಯ ಅಸೆಂಬ್ಲಿಯ ಚುನಾವಣೆಗಳ ಫಲಿತಾಂಶದಂತೆ ಎ. ಕೆ. ಫಜಲುಲ್ ಹಕ್ಕರು ಪೂರ್ವ ಪಾಕಿಸ್ತಾನದ ಮುಖ್ಯ ಮಂತ್ರಿಗಳೊಡನೆ ಪಶ್ಚಿಮ ಬಂಗಾಲದ ನಾಯಕರುಗಳೊಡನೆ ಚರ್ಚೆ ಮಾಡಲು ಕಲಕತ್ತೆಗೆ ಭೆಟ್ಟಿ ನೀಡಿದರು. ಪಶ್ಚಿಮ ಪಾಕಿಸ್ತಾನದ ದೃಷ್ಟಿಯಲ್ಲಿ ಇಂತಹ ಚಟುವಟಿಕೆಗಳು ದೇಶದ್ರೋಹವೆನಿಸಿ ಫಜಲುಲ್ ಹಕ್ಕರನ್ನು ಕೂಡಲೇ ಪದಚ್ಯುತಿಗೊಳಿಸಲಾಯಿತು. ಇದೂ ಅಲ್ಲದೇ ಹೊಸದಾಗಿ ರಚಿತವಾಗಿದ್ದ ಸಂವಿಧಾನವನ್ನು ರದ್ದುಗೊಳಿಸಿ ಇಸ್ಕಂದರ್ ಮಿರ್ಜಾರವರನ್ನು ಗವ್ಹರ್ನರರನ್ನಾಗಿ ಕಳಿಸಲಾಯಿತು. ಇದು

ಪೂರ್ವ ಪಾಕಿಸ್ತಾನಕ್ಕೆ ಒದಗಿದ ಪ್ರಥಮ ರಾಜಕೀಯ ಆಘಾತ ವೆನ್ನಬಹುದು.

ಪಾಕಿಸ್ತಾನದಲ್ಲಿ ದಿನೇ ದಿನೇ ಹೆಚ್ಚುತ್ತಿದ್ದ ರಾಜಕೀಯ ಅಸ್ಥಿರತೆಯನ್ನು ತಡೆಯಲು ೧೯೫೬ ರಲ್ಲಿ ಸಂವಿಧಾನವನ್ನು ರಚಿಸಲಾಯಿತು. ಈ ಸಂವಿಧಾನದ ಪ್ರಮುಖ ಅಂಶವೆಂದರೆ ಪೂರ್ವ ಮತ್ತು ಪಶ್ಚಿಮ ಭಾಗಗಳ ನಡುವೆ ಒಂದು ರೀತಿಯ ಸಮಾನತೆಯ ಸಂಬಂಧವನ್ನು ಒದಗಿಸುವದು. ಸುಹ್ರಾವರ್ದಿಯವರು ಈ ರಿಯಾಯತಿಗೆ ಬದಲಾಗಿ ಇಡೀ ಪಶ್ಚಿಮ ಪಾಕಿಸ್ತಾನವನ್ನು ಒಂದು ಘಟಕವೆಂದು ಪರಿಗಣಿಸಲು ಒಪ್ಪಿಕೊಂಡರು. ಈ ಒಂದೇ ಘಟಕದ ತತ್ವವು ಪಂಜಾಬಿಗೆ ಅನುಕೂಲಕರವಾಗಿದ್ದು, ಪಶ್ಚಿಮದ ಇತರ ಪ್ರಾಂತ್ಯಗಳು ತಮ್ಮ ಹಿತರಕ್ಷಣೆಗೆ ಪೂರ್ವ ಪಾಕಿಸ್ತಾನವನ್ನೇ ಅವಲಂಬಿಸಬೇಕಾಯಿತು. ಇದೇ ಸಂದರ್ಭದಲ್ಲಿ ಸುಹ್ರಾವರ್ದಿಯವರು ಪೂರ್ವ ಪಾಕಿಸ್ತಾನದ ಚುನಾವಣೆಗಳಲ್ಲಿ ಸಂಯುಕ್ತ ಮತದಾನ (Joint Electorate) ಪದ್ಧತಿಯನ್ನು ಪಡೆದುಕೊಂಡರು. ಈ ಪದ್ಧತಿಯ ಉಪಯುಕ್ತತೆಯಿಂದಲೇ ಪೂರ್ವ ಬಂಗಾಲದಲ್ಲಿ ಹಿಂದೂ, ಮುಸ್ಲಿಂ ಸಾಮಾನ್ಯ ಜನತೆ ಒಂದಾಗಿ ನಿಲ್ಲುವ ಪರಿಪಾಠ ಬೆಳೆದು ಬಂದಿತು. ಈ ಎಲ್ಲಾ ಬದಲಾವಣೆಗಳಿಂದಾಗಿ ಜಿನ್ನಾರವರ ಹಳೆಯ ದ್ವಿ-ರಾಷ್ಟ್ರ ಸಿದ್ಧಾಂತವು ಸಂಪೂರ್ಣ ಬದಲಾವಣೆ ಹೊಂದಿತು. ಅಂದು ಅದು ಹಿಂದೂ-ಮುಸ್ಲಿಮರ ಭಿನ್ನತೆಯನ್ನು ಆಧರಿಸಿದ್ದರೆ. ಈ ನೂತನ ರಾಜ್ಯಾಂಗ ವ್ಯವಸ್ಥೆಯಲ್ಲಿ ಅದು ಪೂರ್ವ ಮತ್ತು ಪಶ್ಚಿಮ ಪಾಕಿಸ್ತಾನ ಎಂಬ ಎರಡು ಭಿನ್ನ ಜನಾಂಗ ಮತ್ತು ಪ್ರದೇಶಗಳಿಂದ

ಕೊಡಿದ ದ್ವಿ-ರಾಷ್ಟ್ರ ಸಿದ್ಧಾಂತವೆನಿಸಿತು. ಬಂಗ್ಲಾ ದೇಶದ ಉದಯದಿಂದ ಜಿನ್ನಾರವರ ದ್ವಿ-ರಾಷ್ಟ್ರ ಸಿದ್ಧಾಂತದ ಸಮಾಧಿಯಾಗಿ ಈ ಹೊಸ ದ್ವಿ-ರಾಷ್ಟ್ರ ಸಿದ್ಧಾಂತಕ್ಕೆ ಜಯ ಹಾಗೂ ಮಾನ್ಯತೆ ದೊರಕಿದೆ. ಈ ಸಿದ್ಧಾಂತಕ್ಕೆ ೧೯೫೬ ರ ಸಂವಿಧಾನದಲ್ಲಿ ಕಲ್ಪಿಸಿದ ಹೊಸ ಅರ್ಥದಿಂದಾಗಿ ಪ್ರಾರಂಭವಾದ ಕ್ರಾಂತಿ ಬಂಗ್ಲಾ ದೇಶದ ಉದಯದಲ್ಲಿ ಪರ್ಯವಸಾನವಾಯಿತು.

● ●

## ' ಸೋನಾರ ಭಾಷಾ '

"ನನ್ನಯ ಚಿನ್ನದ ಬಂಗ್ಲಾದೇಶವೆ !
ನೀನೆ ನನ್ನೆದೆಯ ಮಿಡಿಸುತಿಹೆ,
ಚಿರದಿನವೂ ! ನಿನ್ನ ಮುಗಿಲು ಆ ನಿನ್ನ ಗಾಳಿ ಈ-
ಪ್ರಾಸದಿ ಕೊಳಲನು ನುಡಿಸುತಿವೆ "

( **ರವೀಂದ್ರ** : ಅನು : ಪ್ರಹ್ಲಾದ ನರೇಗಲ್ )

ಪಶ್ಚಿಮ ಮತ್ತು ಪೂರ್ವ ಪಾಕಿಸ್ತಾನಗಳ ನಡುವೆ ಆದ ಘರ್ಷಣೆಗೆ ಇನ್ನೊಂದು ಪ್ರಮುಖ ಕಾರಣವಿದೆ. ಪಶ್ಚಿಮದವರ ಭಾಷೆ ಉರ್ದು ಆಗಿದ್ದು, ಪೂರ್ವದವರ ಭಾಷೆ ಬಂಗಾಲಿ ಆಗಿದೆ. ಆದ್ದರಿಂದ ಎರಡೂ ಭಾಗಗಳವರು ತಮ್ಮ ಭಾಷೆಗೇ ಪ್ರಾಮುಖ್ಯತೆ ಕೊಟ್ಟದ್ದು ಸಹಜ. ಆದರೆ ಪಶ್ಚಿಮದವರು ಉರ್ದುವನ್ನೇ ಪಾಕಿಸ್ತಾನದಾದ್ಯಂತ ಏಕಮೇವ ಅಧಿಕೃತ ಭಾಷೆ ಎಂದು ಸಾರಿದಾಗ ಬಂಗಾಲಿಗಳು ತಮ್ಮ ಶಕ್ತಿಮೀರಿ ವಿರೋಧಿಸತೊಡಗಿದರು. ಮೊಹಮ್ಮದಾಲಿ ಜಿನ್ನಾರವರು ೧೯೪೮ರ ರ ಮಾರ್ಚ ೨೪ ರಂದು ಡಾಕಾ ವಿಶ್ವವಿದ್ಯಾಲಯದ ಘಟಿಕೋತ್ಸವ ಭಾಷಣ ಮಾಡುವಾಗ ಉರ್ದು ಭಾಷೆ ಪಾಕಿಸ್ತಾನದ ರಾಷ್ಟ್ರ ಭಾಷೆ ಎಂದು ಸಾರುತ್ತ ಇದರ ವಿರುದ್ಧ 'ಚ'ಕಾರ ಎತ್ತುವವರು ಪಾಕಿಸ್ತಾನದ ಶತ್ರುಗಳೆಂದು ಹೇಳಿದಾಗ ಅಲ್ಲಿಯೇ

ಪ್ರಸ್ತುತರಾಗಿದ್ದ ವಿದ್ಯಾರ್ಥಿಗಳ ಗುಂಪು ಎದ್ದು ನಿಂತು ಶಿಸ್ತಿನಿಂದ ಈ ರೀತಿ ಘೋಷಣೆ ಮಾಡಿತು: "ಪಾಕಿಸ್ತಾನದ ಒಗ್ಗಟ್ಟಿನಲ್ಲಿ ನಮಗೆ ವಿಶ್ವಾಸವಿದೆ; ಜಿನ್ನಾರವರ ನಾಯಕತ್ವದಲ್ಲಿ ನಮಗೆ ವಿಶ್ವಾಸವಿದೆ: ಮತ್ತು ಬಂಗಾಲಿಯು ನಮ್ಮ ರಾಷ್ಟ್ರ ಭಾಷೆ ಎಂಬುದರಲ್ಲಿಯೂ ನಮಗೆ ಧೃಢವಿಶ್ವಾಸವಿದೆ". ಪಾಕಿಸ್ತಾನದ ನಿರ್ಮಾತೃ ಜಿನ್ನಾರವರ ವಿರುದ್ಧ ಈ ಶಿಸ್ತಿನ ಮತ್ತು ಅಷ್ಟೇ ಧೃಢ ನಿರ್ಧಾರವನ್ನು ಅಂದು ಪ್ರದರ್ಶಿಸಿದ ಈ ಯುವ ನಾಯಕ ಇನ್ನಾರೂ ಆಗಿರದೆ ಇಂದಿನ ಜನಪ್ರಿಯ "ವಂಗಬಂಧು" ಷೇಖ ಮುಜಿಬುರ್ ರಹಮಾನರೇ ಆಗಿದ್ದರು.

ಇದರಿಂದ ಪಾಕಿಸ್ತಾನದ ಆಳರಸರು ಯಾವ ಪಾಠವನ್ನೂ ಕಲಿತಂತೆ ಕಾಣುವದಿಲ್ಲ. ಉರ್ದು ರಾಷ್ಟ್ರಭಾಷೆಯಾಗುವ ದಿಶೆಯಲ್ಲಿ ಅವರು ಅವಶ್ಯ ಕಾರ್ಯಾಚರಣೆಯಲ್ಲಿ ತೊಡಗಿದ್ದರು. ಪೂರ್ವ ಬಂಗಾಲದ ವಿದ್ಯಾರ್ಥಿಗಳೂ, ಹಿರಿಯರೂ, ನಾಗರಿಕರೂ ಒಟ್ಟಾಗಿ ಅದನ್ನು ವಿರೋಧಿಸುವ ಪಣತೊಟ್ಟರು. ಈ ಪ್ರದರ್ಶನಗಳನ್ನು ಪೋಲೀಸರು ಹತ್ತಿಕ್ಕುತ್ತಾ ಹೋದಂತೆ ಬಂಗಾಲಿಗಳ ನಿರ್ಧಾರ ಧೃಢವಾಗುತ್ತಾ ಹೋಯಿತು. ೧೯೫೧ ರ ಜನಗಣತಿಯಂತೆ ಪೂರ್ವ ಪಾಕಿಸ್ತಾನದಲ್ಲಿ ಬಂಗಾಲಿ ಭಾಷೆಯನ್ನಾಡುವವರ ಸಂಖ್ಯೆ ಶೇಕಡ ೫೪.೬ ಇದ್ದು ಉರ್ದು ಮಾತನಾಡುವವರ ಸಂಖ್ಯೆ ಕೇವಲ ೭.೨ ಇದ್ದು ಉರ್ದುವನ್ನೇ ಬಲಾತ್ಕಾರವಾಗಿ ರಾಷ್ಟ್ರಭಾಷೆ ಎಂದು ಹೇರುವ ಪ್ರಯತ್ನ ಅನ್ಯಾಯ ಮತ್ತು ಹಾಸ್ಯಾಸ್ಪದವಾಗಿತ್ತು. ಪಶ್ಚಿಮದವರ ಅಭಿಪ್ರಾಯ

ದಲ್ಲಿ ಇಸ್ಲಾಂ ಧರ್ಮೀಯರಿಗೆ ಉರ್ದು ಸಹಜ ಮತ್ತು ಅನಿವಾರ್ಯ ಭಾಷೆ. ಬಂಗಾಲಿ ಭಾಷೆ ಮುಸ್ಲಿಂ ವಿರೋಧಿ ಭಾಷೆಯಾಗಿದ್ದು 'ಕಾಫಿರ' ರೆನಿಸಿಕೊಂಡ ಹಿಂದುಗಳ ಭಾಷೆಯಾಗಿದೆ. ಬಂಗಾಲಿ ಸಂಸ್ಕೃತ ಮೂಲಹೊಂದಿರುವ ಭಾಷೆ ಎಂಬುದು ನಿರ್ವಿವಾದ. ಆದ್ದರಿಂದ ಅಂತಹ ಹಿಂದೂ-ಜನಿತ ಭಾಷೆಗೆ ಇಸ್ಲಾಂ ರಾಷ್ಟ್ರದಲ್ಲಿ ಅಧಿಕೃತ ಸ್ಥಾನ ದೊರೆಯುವದು ಸಾಧ್ಯವೇ ಇಲ್ಲ. ಬಂಗಾಲಿ ಭಾಷೆಯ ಪರವಾಗಿ ನಡೆದ ಆಂದೋಲನ ಪಾಕಿಸ್ತಾನವನ್ನು ದುರ್ಬಲಗೊಳಿಸುವ ಹಿಂದೂಗಳಿಂದ ಪ್ರಚೋದಿತವಾದ ದೇಶದ್ರೋಹಿ ಪ್ರಯತ್ನವೆಂದು ಅವರ ಅಭಿಪ್ರಾಯವಾಗಿತ್ತು. ಇದರನ್ವಯ ಪಾಕಿಸ್ತಾನದ ಘಟನಾ ಸಭೆಯಲ್ಲಿ ಬಂಗಾಲಿ ಭಾಷೆಯ ಬಳಕೆಯನ್ನೂ ಸಹ ನಿರ್ಬಂಧಿಸಲಾಯಿತು. ಉರ್ದು ವಿರೋಧಿ ಚಳುವಳಿಯ ನಾಯಕತ್ವವನ್ನು ವಹಿಸಿದ ಮುಜಿಬುರ್ ರಹಮಾನರು ಅನೇಕ ಸಲ ಜೇಲುವಾಸ ಅನುಭವಿಸಬೇಕಾಯಿತು.

ಪಶ್ಚಿಮ ಪಾಕಿಸ್ತಾನದವರಲ್ಲಿ ಎಂದಿನಿಂದಲೂ ತಮ್ಮ ಸಮಸ್ಯೆಗಳೆಲ್ಲಕ್ಕೂ ಭಾರತೀಯರು ಮತ್ತು ತಮ್ಮಲ್ಲಿಯ ಹಿಂದುಗಳೇ ಕಾರಣರೆಂಬ ಭ್ರಮೆ ಸೇರಿಕೊಂಡಿದೆ. ಉರ್ದು ವಿರೋಧಿ ಚಳುವಳಿಯನ್ನು ಅವರು ಈ ಭ್ರಮಿತ ದೃಷ್ಟಿಯಿಂದಲೇ ನೋಡುತ್ತಾ ಹೋದರೇ ವಿನಹ ಅದರಲ್ಲಡಗಿದ್ದ ಶಕ್ತಿಯನ್ನು ಅರ್ಥಮಾಡಿಕೊಳ್ಳದಾದರು. ಆದ್ದರಿಂದಲೇ ಅವರು ೧೯೫೦ ರಲ್ಲಿ ಪಾಕಿಸ್ತಾನದಲ್ಲಿದ್ದ ಹಿಂದೂ ಅಲ್ಪಸಂಖ್ಯಾಕರ ಮೇಲೆ ಅತ್ಯಾಚಾರ

ವೆಸಗಿ ಹಿಂದೂಗಳು ಭಯಭೀತರಾಗುವಂತೆ ಮಾಡಿ ಅವರು ದೇಶಬಿಟ್ಟು ಹೋಗುವಂತೆ ಮಾಡಿದರು. ಪಾಕಿಸ್ತಾನವು ಇಸ್ಲಾಂ ರಾಷ್ಟ್ರವೆಂದು ಸಾರಲಾಯಿತಲ್ಲದೇ ರಾಷ್ಟ್ರದ ಎಲ್ಲಾ ಅಂಗಗಳ ಕಾರ್ಯಕಲಾಪಗಳು ಇಸ್ಲಾಂ ಧರ್ಮಕ್ಕನುಗುಣವಾಗಿಯೇ ಇರಬೇಕೆಂದು ಸಾರಲಾಯಿತು. ಎಂದರೆ ಪಾಕಿಸ್ತಾನದ ಎರಡೂ ಭಾಗಗಳಲ್ಲಿ ಏನೇ ಭಿನ್ನತೆಗಳಿದ್ದರೂ ಇಸ್ಲಾಂ ಧರ್ಮ ಅವರೆಲ್ಲರನ್ನೂ ಒಟ್ಟುಗೂಡಿಸುವ ಅಂಶ ಅಥವಾ ಶಕ್ತಿ ಎಂದು ಅವರು ನಂಬಿದ್ದರು. ಆದರೆ, ಏನೇ ಹೇಳಿದರೂ ಬಂಗಾಲಿಗಳು ತಮ್ಮ ಭಾಷಾಭಿಮಾನವನ್ನು ತೊರೆಯಲು ಸಿದ್ಧರಾಗಲಿಲ್ಲ ಬಂಗಾಲಿ ಭಾಷೆಗಿದ್ದ ಐತಿಹ್ಯ, ಭವ್ಯ ಪರಂಪರೆ, ಶಬ್ದ ಹಾಗೂ ಸಾಹಿತ್ಯ ಸಂಪತ್ತು ಇವೆಲ್ಲವೂ ಅವರ ಹೆಮ್ಮೆಯ ಸಂಕೇತಗಳಾಗಿದ್ದವು. ಬಂಗಾಲಿ ಭಾಷೆಯಲ್ಲಿನ ಕವಿ ಪರಂಪರೆ ಅಮೋಘವಾದದ್ದು. ಕವಿಪುಂಗವ ರವೀಂದ್ರನಾಥ ಟಾಗೋರರು ಸರ್ವಮಾನ್ಯರಾದವರು. ಈ ಎಲ್ಲಾ ಪರಂಪರೆಯನ್ನು ತೊಡೆದುಹಾಕುವ ಯಾವ ಪ್ರಯತ್ನವನ್ನೇ ಆಗಲಿ ವಿರೋಧಿಸಲು ತಮ್ಮ ಪ್ರಾಣತ್ಯಾಗಕ್ಕೂ ಅವರು ಸಿದ್ಧರಾದರು.

ಏನೆಲ್ಲಾ ಪ್ರಯತ್ನ ಮಾಡಿದರೂ ಸಫಲವಾಗದ ಪಶ್ಚಿಮ ಪಾಕಿಸ್ತಾನದ ಆಳರಸರು ಮತಾಂಧತೆಯ ಉಪಯೋಗ ಪಡೆಯಲೂ ಎತ್ನಿಸಿದರು. ಉರ್ದು ವಿರೋಧಿಗಳು ಇಸ್ಲಾಂ ಧರ್ಮವನ್ನು ವಿರೋಧಿಸಿದಂತೆ, ಮತ್ತು ಉರ್ದುವಲ್ಲದೆ ಇತರ ಭಾಷೆಗಳಲ್ಲಿ ಪವಿತ್ರ 'ಖುರಾನ' ವನ್ನು ಓದುವದು ಧರ್ಮ

ಬಾಹಿರ. ಆದ್ದರಿಂದ ಬಂಗಾಲಿಯಲ್ಲಿಯೇ ಆ ಗ್ರಂಥವನ್ನು ಓದ ಬೇಕೆನ್ನುವವರು ಕೊನೆಯ ಪಕ್ಷ ಆ ಭಾಷೆಗೆ ಉರ್ದು ಲಿಪಿ ಯನ್ನು ಬಳಸಲೇಬೇಕು. ಇವೆಲ್ಲಾ ಆಜ್ಞೆಗಳನ್ನು ಚಿತ್ತಗಾಂಗದ ಮೌಲಾನಾ ರಘುಲಕ್ಷಿಕರ ಅಲಿ ಎಂಬ ಧರ್ಮಾಧಿಕಾರಿಯ ಕನಸಿ ನಲ್ಲಿ ಬಂದು ಪೈಗಂಬರರು ಅಪ್ಪಣೆ ಕೊಡಿಸಿದ್ದಾರೆ ಎಂದು ಮುಂತಾದ ಕಟ್ಟು ಕಥೆಗಳನ್ನು ಸರಕಾರದವರು ಮುದ್ರಿಸಿ ಹಂಚಿ ದರು. ಇದು ಪಾಕಿಸ್ತಾನ ಸರಕಾರದ ಪ್ರಚಾರದ ವೈಖರಿಗೆ ಒಂದು ನಿದರ್ಶನವಾಗಿದೆ. ಎಂದರೆ ಕೊನೆಗೆ ಬಂಗಾಲಿ ಭಾಷೆಗೆ ಉರ್ದು ಲಿಪಿಯನ್ನಾದರೂ ಅಳವಡಿಸಿಕೊಳ್ಳಬೇಕೆಂಬ ನಿಲುವು ಯನ್ನು ಸರಕಾರ ತಳೆಯಿತೆನ್ನಬಹುದು. ಬಂಗಾಲಿಗಳಿಗೆ ಇದೂ ಸಮ್ಮತವಾಗಲಿಲ್ಲ. ಇದರ ಫಲಶ್ರುತಿಯಾಗಿ ಸರಕಾರವು ಹಿಂದೂ ಬುದ್ಧಿ ಜೀವಿಗಳು ಮತ್ತು ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವ ಬರಹಗಾರರು ಮುಂತಾದವರನ್ನು ಹಿಂಸಿಸತೊಡಗಿ ದರು.

ಪಶ್ಚಿಮ ಪಾಕಿಸ್ತಾನದವರು ಹೀಗೆ ಬಂಗಾಲಿ ಭಾಷೆಯನ್ನು ವಿರೋಧಿಸುವದು ಮಾತ್ರವಲ್ಲದೇ, ತಮ್ಮ ದೇಶದ ಜನಸಂಖ್ಯೆಯ ಅರ್ಧಕ್ಕಿಂತಲೂ ಹೆಚ್ಚು ಜನರ ಭಾಷೆಯನ್ನು ಹತ್ತಿಕ್ಕಲು ಪ್ರಯತ್ನ ಮಾಡಿದರು. ಪಾಕಿಸ್ತಾನದ ಪಾಸಪೋರ್ಟಗಳಲ್ಲಿ ಉರ್ದು, ಇಂಗ್ಲೀಷ, ಫ್ರೆಂಚ ಮುಂತಾದ ಎಲ್ಲಾ ಭಾಷೆಗಳನ್ನು ಬಳಸಲಾಗಿದೆಯಾದರೂ ಬಂಗಾಲಿಗೆ ಮಾತ್ರ ಸ್ಥಾನವಿರಲಿಲ್ಲ. ಸರ ಕಾರಿ ಪ್ರಕಟನೆಗಳಲ್ಲಿ – ನಾಣ್ಯ ಗೆಜೆಟ್‌ನಲ್ಲಿಯೂ – ಒಂದೂ

ಬಂಗಾಲಿ ಶಬ್ದವಿಲ್ಲದಿರುವದು ಆಶ್ಚರ್ಯಕರ. ಡಾಕಾ ವಿಮಾನ ನಿಲ್ದಾಣ ಮುಂತಾದಲ್ಲಿ ಸರಕಾರದವರು ಇಂಗ್ಲೀಷ ಮತ್ತು ಉರ್ದು ಎರಡೇ ಭಾಷೆಗಳನ್ನು ಬಳಸುತ್ತಿದ್ದರು. ಇಂತಹ ದಮನ ನೀತಿಯನ್ನು ವಿರೋಧಿಸಿ ೧೯೫೨ ರಲ್ಲಿ ಚಳುವಳಿ ಮಾಡಿದವರನ್ನು ನಿರ್ದಯವಾಗಿ ಕೊಲ್ಲಲಾಯಿತಲ್ಲದೇ ಅವರ ನಾಯಕರುಗಳನ್ನು ದಂಗೆಕೋರರೆಂದು ಶಿಕ್ಷಿಸಲಾಯಿತು. ತಮ್ಮ ಸಂಸ್ಕೃತಿಯನ್ನೇ ನಿರ್ನಾಮಗೊಳಿಸಲು ಪಶ್ಚಿಮ ಪಾಕಿಸ್ತಾನ ಸರಕಾರವು ಪಣತೊಟ್ಟಿದೆ ಎಂದು ಇಡೀ ಬಂಗಾಲದ ಜನತೆ ಮತ್ತು ಆಳರಸರ ಸಹಕಾರಿಗಳೆಂದೆನಿಸಿದ ನಾಯಕರುಗಳಾದ ಮಿಯಾ ಮೌಲತಾನಾ ಮತ್ತು ಅತೌಉರ್ ರಹಮಾನ ಮುಂತಾದವರು ಅರಿತುಕೊಂಡರಲ್ಲದೆ ಅದನ್ನು ಸ್ಪಷ್ಟವಾಗಿ ಹೇಳುತ್ತಾ ಬಂದರು. ಭಾಷಾ ಬಂಧನ ಬಹಳ ಪ್ರಮುಖ ಪಾತ್ರವುಳ್ಳ ಅಂಶ. ನಾಡಿನ ಭಾವೈಕ್ಯವನ್ನುಂಟುಮಾಡುವದರಲ್ಲಿ ಒಂದೇ ಭಾಷೆ ಅಥವಾ ಪಲವು ಭಾಷೆಗಳ ಸಹಬಾಳ್ವೆ ಮತ್ತು ಪರಸ್ಪರ ಸಹಿಷ್ಣುತೆ ಅನಿವಾರ್ಯ. ಅದಿಲ್ಲದಾಗ ಒಂದೇ ದೇಶವಾಗಿದ್ದ ಪಾಕಿಸ್ತಾನದ ಪೂರ್ವಭಾಗದವರು ಪಶ್ಚಿಮ ಭಾಗಕ್ಕೆ ಹೋದಾಗ ತಾವು ಯಾವುದೋ ಬೇರೆ ದೇಶದಲ್ಲಿರುವೆವೇನೋ ಎಂಬ ಭಾವನೆ ಉಂಟಾಗಿದ್ದುದು ಆಶ್ಚರ್ಯವೇನಿಲ್ಲ. ಪಶ್ಚಿಮ ಪಾಕಿಸ್ತಾನ ಸರಕಾರದ ಮತ್ತು ಅಲ್ಲಿನ ವರ್ತಮಾನ ಪತ್ರಿಕೆಗಳ ಈ ಸಂಕುಚಿತ ಭಾಷಾನೀತಿ ಮತ್ತು ಉರ್ದು ಭಾಷೆಯನ್ನು ಬಲಾತ್ಕಾರವಾಗಿ ಹೇರಿ ಬಂಗಾಲಿ ಭಾಷೆಯನ್ನು ನಿರ್ಮೂಲಗೊಳಿಸುವ ಪ್ರಯ

ತ್ನವು ಪಾಕಿಸ್ತಾನದ ಇಬ್ಭಾಗಕ್ಕೆ ಕಾರಣವಾಯಿತೆಂಬುದು ನಿರ್ವಿವಾದ. ಅಯೂಬಖಾನರು ಉರ್ದು ಮತ್ತು ಬಂಗಾಲಿ ಭಾಷೆಗಳ ಪೋಷಣೆಗೆ ಎರಡು ಪ್ರತ್ಯೇಕ ಮಂಡಲಿಗಳನ್ನು ರಚಿಸಿದರಾದರೂ ಜೂನ್ ೧೯೬೭ ರಲ್ಲಿ ಪಾಕಿಸ್ತಾನ ಮತ್ತು ಢಾಕಾ ರೇಡಿಯೋಗಳಿಂದ ರವೀಂದ್ರ ಗೀತೆಗಳನ್ನು ಪ್ರಸಾರ ಮಾಡಬಾರದೆಂದು ಬಹಿಷ್ಕಾರ ಹಾಕಿದರು. ಹೀಗೆ ಹಲವಾರು ರೀತಿಯಲ್ಲಿ ಬಂಗಾಲಿ ಭಾಷೆ ತನ್ಮೂಲಕ ಅದರ ಸಂಸ್ಕೃತಿಯನ್ನು ತುಳಿದು ಹಾಕಿ ಪೂರ್ವ ಬಂಗಾಲ ಮತ್ತು ಹಿಂದುಸ್ಥಾನದ ಭಾಗವಾದ ಪಶ್ಚಿಮ ಬಂಗಾಳಗಳ ನಡುವೆ ಯಾವ ಸಂಬಂಧಗಳೂ ಮತ್ತು ನೆನಪುಗಳ ಉಳಿಯದಂತೆ ಮಾಡಬೇಕೆಂಬುದು ಪಾಕಿಸ್ತಾನದ ಬಂಗಾಲಿ ವಿರೋಧಿ ನೀತಿಯ ಆಧಾರವಾಗಿದ್ದಿತು. "ಭಾರತವನ್ನು ದ್ವೇಷಿಸಿರಿ" ( Hate India Compaign ) ಚಳುವಳಿಯು ಅನೇಕ ರೂಪು ತಳೆದಿದ್ದು ಅದು ಪಾಕಿಸ್ತಾನ ಸರಕಾರದ ನೀತಿಯ ಹಾಸುಹೊಕ್ಕಾಗಿ ಬೆಳೆದು ಬಂದಿದೆ. ಆದ್ದರಿಂದಲೇ ೧೯೪೭, ೧೯೬೫ ಮತ್ತು ೧೯೭೧ ರಲ್ಲಿ ಆ ದೇಶವು ಭಾರತದ ಮೇಲೆ ಸನ್ನದ್ಧ ಮಿಲಿಟರಿ ದಾಳಿ ನಡೆಸಿ ಭಾರತವನ್ನು ಯುದ್ಧಕ್ಕೆಳೆಯಿತು. ಆದರೆ ಈ ನೀತಿಯಿಂದ ಅವರು ತಮ್ಮ ಕಾಲ ಮೇಲೆ ತಾವೇ ಕಲ್ಲು ಹಾಕಿಕೊಂಡಂತಾಗಿದೆ. ಬಂಗಾಲಿ ಭಾಷೆಯ ಅಸ್ತಿತ್ವವನ್ನು ಕಾಪಾಡಲು, ಅದಕ್ಕೆ ಗೌರವಸ್ಥಾನ ದೊರಕಿಸಿಕೊಳ್ಳಲು ಬಂಗಾಲಿಗಳು ಕೊನೆಯವರೆಗೂ ಹೋರಾಡಿ ಅಪಾರ ತ್ಯಾಗಮಾಡಿ ಸ್ವತಂತ್ರ ಬಂಗ್ಲಾದೇಶವನ್ನೇ ನಿರ್ಮಿಸಿದ್ದಾರೆ. ಬಹಿಷ್ಕೃತಗೊಂಡಿದ್ದ ರವೀಂದ್ರರ ಗೀತವೇ ಆದ "ಅಮಾರ

ಸೋನಾರ ಬಂಗ್ಲಾ " ಎಂಬ ಗೀತೆಯನ್ನೇ ತಮ್ಮ ರಾಷ್ಟ್ರಗೀತೆಯನ್ನಾಗಿ ಮಾನ್ಯಮಾಡುವದರ ಮೂಲಕ, ತಮ್ಮ ಭಾಷೆ ಬಂಗಾರದಂತಹ ಭಾಷೆ ಎಂದು ಪ್ರತಿಪಾದಿಸಿದ್ದಾರೆ. ಇದು ಪಾಕಿಸ್ತಾನದ ಅಪ್ರಬುದ್ಧ ನೀತಿಗೆ ಸರಿಯಾದ ಉತ್ತರವಾಗಿದೆ.

# ೭

# ಸುವರ್ಣ ಭೂಮಿ

"ಓ ! ನನ್ನ ಸ್ವರ್ಣಮ ವಂಗ ಭೂಮಿ
ನಾ ನಿನ್ನ ಪ್ರೀತಿಸುವೆ, ಪೂಜಿಸುವೆ !
ದಾಹಮುಕ್ತಿಯು ನೀನೊಂದು ಇತಿಹಾಸ
ಯುಗ ಯುಗದ ಆದಿಯಿಂದ ನೀನಿರುವೆ ಶುಭೆ ! "

(**ಖಾಲೇದಾ ಅಬೀದ ಚೌಧರಿ**: ಅನು: ಪಂಚಾಕ್ಷರಿ ಹಿರೇಮಠ)

ಬಂಗ್ಲಾದೇಶದ ಕವಿಗಳು ತಮ್ಮ ನೆಲವನ್ನು " ಸೋನಾರ ಬಂಗ್ಲಾ " ಅಥವಾ "ಚಿನ್ನದ ನಾಡು" ಎಂದು ಬಣ್ಣಿಸಿರುವದು ಅರ್ಥಪೂರ್ಣವಾಗಿದೆ. ಬಂಗಾರದ ಬಂಗ್ಲಾ ಕೇವಲ ಕವಿಯ ಕಲ್ಪನೆಯಲ್ಲ. ಇದು ಸತ್ಯ ಸ್ಥಿತಿಯೇ ಆಗಿದೆ. ಏಕೆಂದರೆ ಬಂಗ್ಲಾ ನಾಡು ವಿಪುಲವಾದ ನೈಸರ್ಗಿಕ ಸಂಪತ್ತನ್ನು ಪಡೆದಂತಹ ನಾಡು. ಈ ಭಾಗದಲ್ಲಿ ಫಲವತ್ತಾದ ನೆಲವಿದೆ. ಗಂಗಾ. ಬ್ರಹ್ಮಪುತ್ರಾ, ಪದ್ಮಾ ಮುಂತಾದ ಸುಮಾರು ಐವತ್ತು ನದಿಗಳು ಮತ್ತು ಉಪನದಿಗಳು ಈ ಫಲವತ್ತಾದ ನೆಲಕ್ಕೆ ಸದಾ ನೀರುಣಿಸಲು ಸಮರ್ಥವಾಗಿವೆ. ಈ ನದಿಗಳು ಆಂತರಿಕ ಸಂಪರ್ಕ ಸಾಧನಗಳೂ ಆಗಿವೆ. ಬಂಗ್ಲಾ ದೇಶ ಕೃಷಿ ಪ್ರಧಾನ ನಾಡು. ಸರಾಸರಿ ೫೫" ಮಳೆ ಬೀಳುವ ರಾಜಷಾಹಿ ಮತ್ತು ಕುಷ್ಟಿಯಾ ಜಿಲ್ಲೆಗಳನ್ನು ಬಿಟ್ಟರೆ ಇಡೀ ಬಂಗ್ಲಾದೇಶದಲ್ಲಿ ಸರಾಸರಿ ೬೦" ಗಿಂತ ಹೆಚ್ಚು ಮಳೆ ಬೀಳುತ್ತದೆ. ಇಲ್ಲಿ ಪ್ರಪಂಚದಲ್ಲಿಯೇ ಅತೀ ಹೆಚ್ಚು

ಕಚ್ಚು ಸಣಬಿನ ನಿರ್ಯಾತದಿಂದಲೇ ಪರದೇಶಗಳಿಂದ ವಿಪುಲ ಹಣ ದೊರೆಯುತ್ತಿದ್ದು ಪಾಕಿಸ್ತಾನಕ್ಕೆ ಅತಿ ಹೆಚ್ಚಿನ, ಅಂದರೆ ಆ ದೇಶ ಗಳಿಸುತ್ತಿದ್ದ ವಿದೇಶಿವಿನಿಮಯದ ಶೇಕಡಾ ೮೦ ರಷ್ಟು ಆದಾಯವನ್ನು ಗಳಿಸಿಕೊಡುತ್ತಿತ್ತು. ಇದೇ ರೀತಿ ಇಲ್ಲಿ ಚಹ, ಭತ್ತ, ಗೋದಿ ಮುಂತಾದ ಆಹಾರ ಬೆಳೆಗಳೂ ಬೆಳೆಯುತ್ತವೆ. ಬಂಗ್ಲಾದೇಶ, ಅಂದರೆ ಮೊದಲಿನ ಪೂರ್ವ ಪಾಕಿಸ್ತಾನವು, ಇಡೀ ಪಾಕಿಸ್ತಾನದ ಆರ್ಥಿಕ ರಚನೆಯ ಆಧಾರವಾಗಿದ್ದು ಅದರ ಬೆನ್ನೆಲುಬಿನಂತಿದ್ದಿತು.

ಪಶ್ಚಿಮ ಪಾಕಿಸ್ತಾನದ ಭೂ ವಿಸ್ತೀರ್ಣ ಪೂರ್ವಕ್ಕಿಂತಲೂ ಹೆಚ್ಚಾಗಿದ್ದರೂ ಸಹ ಅದು ಅಷ್ಟು ಫಲವತ್ತಾದ ನೆಲವಲ್ಲ. ಅದರ ಬಹು ಭಾಗ ನೆಲ ಗುಡ್ಡಗಾಡು, ಮರುಭೂಮಿ ಮತ್ತು ಜವುಳು ಭಾಗಗಳಿಂದ ಕೂಡಿದ್ದಾಗಿದೆ. ಪಂಜಾಬ ಮತ್ತು ಸಿಂಧದಲ್ಲಿಯೇ ಸ್ವಲ್ಪ ಫಲವತ್ತಾದ ಭೂಮಿ ಇದೆ. ಹೀಗಾಗಿ ಪಶ್ಚಿಮ ಪಾಕಿಸ್ತಾನದವರು ಹೆಚ್ಚಾಗಿ ಪೂರ್ವ ಪಾಕಿಸ್ತಾನದ ಸಂಪನ್ಮೂಲಗಳನ್ನೇ ಅವಲಂಬಿಸಬೇಕಾಯಿತು. ಪೂರ್ವಪಾಕಿಸ್ತಾನವು ಉತ್ಪಾದಿಸುತ್ತಿದ್ದ ವಾಣಿಜ್ಯ ವಸ್ತುಗಳು ಮತ್ತು ಆಹಾರ ಧಾನ್ಯಗಳನ್ನು ವಿನಿಯೋಗಿಸುವದರಲ್ಲಿ ಪಶ್ಚಿಮಕ್ಕೇ ಅಗ್ರಪ್ರಾಶಸ್ತ್ಯ ಕೊಡಲಾಗುತ್ತಿತ್ತು. ಇದರಿಂದಾಗಿ ಪೂರ್ವ ಪಾಕಿಸ್ತಾನದವರು ತಾವು ಬೆವರು ಸುರಿಸಿ ದುಡಿದುದುರ ಫಲವನ್ನು ತಾವೇ ಉಪಯೋಗಿಸಿಕೊಳ್ಳುವ ಸ್ವಾತಂತ್ರ್ಯವನ್ನು ಹೊಂದಿರಲಿಲ್ಲ. ಎಂದರೆ ಪಶ್ಚಿಮ ಪಾಕಿಸ್ತಾನವು ಪೂರ್ವ ಪಾಕಿಸ್ತಾನವನ್ನು ತನ್ನ ವಸಾ

ಹತುವನ್ನಾಗಿ ಪರಿವರ್ತಿಸಿತು. ಬಂಗ್ಲಾದೇಶದಲ್ಲಿ ಉಂಟಾದ ಕ್ರಾಂತಿಗೆ ಇದು ಬಹುಮುಖ್ಯ ಕಾರಣವಾಯಿತೆನ್ನಬಹುದು. ಇನ್ನು ಈ ಆರ್ಥಿಕ ಶೋಷಣೆಯ ವಿವಿಧ ರೂಪಗಳನ್ನು ವಿವರಿಸಲಾಗುವದು.

ಒಂದು ದೇಶ ಮತ್ತು ಇನ್ನೊಂದು ದೇಶದ ನಡುವೆ ಅಥವಾ ಒಂದೇ ದೇಶದ ವಿವಿಧ ಭಾಗಗಳ ನಡುವೆ ಆರ್ಥಿಕ ಅಸಮಾನತೆ, ಸಾಂಪತ್ತಿಕ ಅಸಮತೋಲನ ಮುಂತಾದವುಗಳು ಇರುವದು ಸಹಜ. ನಮ್ಮ ದೇಶದಲ್ಲಿಯೂ ಕೂಡ ಬೇರೆ ಬೇರೆ ರಾಜ್ಯಗಳ ನಡುವೆ ಇಂತಹ ವ್ಯತ್ಯಾಸಗಳನ್ನು ಕಾಣುತ್ತೇವೆ. ಆದರೆ ಇಂತಹ ಏರುಪೇರುಗಳನ್ನು ಆದಷ್ಟು ಕಡಿಮೆ ಮಾಡಿ ಸಾಧ್ಯವಾದಷ್ಟು ಮಟ್ಟಿಗೆ ಸಮತೋಲವನ್ನುಂಟುಮಾಡುವದು ಸರಕಾರದ ಮುಖ್ಯ ಕರ್ತವ್ಯ. ಈ ದೃಷ್ಟಿಯಿಂದಲೇ ಒಂದು ವಿಶೇಷ ರಾಜಕೀಯ ವ್ಯವಸ್ಥೆಯನ್ನು ಮಾಡಲಾಗಿದೆ. ಸಂಯುಕ್ತ ರಾಜ್ಯ ಪದ್ಧತಿ (Federal State) ಇಂತಹ ಒಂದು ವಿಶೇಷ ವ್ಯವಸ್ಥೆಯಾಗಿದೆ ಎನ್ನಬಹುದು. ವ್ಯಕ್ತಿಗಳಲ್ಲಿ "ಇದ್ದವರು" ಮತ್ತು "ಇಲ್ಲದವರು" ಹೇಗಿರುತ್ತಾರೋ ಹಾಗೆ ರಾಜ್ಯಗಳಲ್ಲಿಯೂ 'ಇದ್ದ' ಹಾಗೂ 'ಇಲ್ಲದ' ರಾಜ್ಯಗಳಿವೆ. ಆದರೆ ಇದ್ದವರು ಇನ್ನೂ ಸಿರಿವಂತರಾಗುವದು, ಇಲ್ಲದವರು ಕಡು ಬಡವರಾಗುವದು ಅಸಮಂಜಸವೆನಿಸುವದು. ಇದೇ ರೀತಿ ಹಿಂದುಳಿದ ಭಾಗಗಳನ್ನು ಸಾಧ್ಯವಾದಷ್ಟು ಮುಂದುವರಿದ ಭಾಗಗಳನ್ನಾಗಿ ಮಾಡಬೇಕಾಗುತ್ತದೆ. ಯಾವ ಸರಕಾರವೇ ಆಗಲಿ ಇಂತಹ ಗುರಿಯನ್ನು ಹೊಂದು

ವದು ಅವಶ್ಯವೆನಿಸುವದು. ಈ ಉದ್ದೇಶದಿಂದ ಸಂಪತ್ತು ಎಲ್ಲೇ ಬೆಳೆಯಲಿ ಅದನ್ನು ಇಡೀ ದೇಶದ ಅಭ್ಯುದಯಕ್ಕಾಗಿ ಉಪಯೋಗಿಸುವದು ಸಮಂಜಸವೆನಿಸಿದರೂ, ಸಂಪದ್ಭರಿತವಾದ ಭಾಗದ ಬೆಳವಣಿಗೆ, ಅಭ್ಯುದಯವು ಕುಂಠಿತವಾಗದಂತೆ ನೋಡಿಕೊಳ್ಳುವದು ಸರಕಾರದ ಹೊಣೆ.

ಆದರೆ ಪಾಕಿಸ್ತಾನದ ರೀತಿಯೇ ಬೇರೆ. ಭಾರತವು ಇಭ್ಭಾಗವಾಗಿ ಪಾಕಿಸ್ತಾನದ ಉದಯವಾದಾಗ ಈ ದೇಶದ ಆರ್ಥಿಕ ಬೆಳವಣಿಗೆ ಯಾವರೀತಿ ಆದೀತೆಂಬುದನ್ನು ಊಹಿಸುವದು ಕಷ್ಟವಾಗಿತ್ತು. ಆದರೂ ಅಂದಿನ ವಸ್ತುಸ್ಥಿತಿಯಂತೆ ಪೂರ್ವ ಪಾಕಿಸ್ತಾನದಲ್ಲಿ ಅತಿ ಹೆಚ್ಚು ಕಚ್ಚಾ ಸಣಬಿನ ಉತ್ಪಾದನೆಯಿದ್ದು, ಪಶ್ಚಿಮ ಪಾಕಿಸ್ತಾನವು ಕಚ್ಚಾ ಹತ್ತಿಯನ್ನು ನಿರ್ಯಾತಮಾಡುವ ಸ್ಥಿತಿಯಲ್ಲಿತ್ತು. ಮತ್ತು ಎರಡೂ ಭಾಗಗಳು ಒಟ್ಟಾಗಿ ಆಹಾರದಲ್ಲಿ ಸ್ವಾವಲಂಬನೆಯನ್ನು ಮುಟ್ಟುವಂತಹ ಸ್ಥಿತಿಯಲ್ಲಿದ್ದವು. ಎಂದರೆ ಇದು ಕೃಷಿ ಪ್ರಧಾನ ದೇಶವೆಂದೆನಿಸಿದ್ದಿತು. ಪಾಕಿಸ್ತಾನವು ಕೃಷಿ ಕ್ಷೇತ್ರದಲ್ಲಿ ಹೆಚ್ಚು ಪ್ರಗತಿಯನ್ನು ಸಾಧಿಸಲು ಪಶ್ಚಿಮ ಪಾಕಿಸ್ತಾನದಲ್ಲಿ ಹೆಚ್ಚು ಹಣ ವಿನಿಯೋಗ ಮಾಡಬೇಕಾಗಿದ್ದರೆ ಪೂರ್ವ ಪಾಕಿಸ್ತಾನದಲ್ಲಿ ಸುಲಭವಾಗಿ ಕೃಷಿ ಪ್ರಗತಿಯನ್ನು ಸಾಧಿಸಬಹುದಾಗಿತ್ತು. ಅಯೂಬಖಾನರ ಆಡಳಿತದ ಪ್ರಮುಖ ಆರ್ಥಿಕ ಸಲಹೆಗಾರರಾಗಿದ್ದ ಮಹಬೂಬ್-ಉಲ್-ಹಕ್‌ರವರ ಮಾತಿನಲ್ಲಿಯೇ ಹೇಳುವದಾದರೆ "ಸರಿಯಾದ ಮಾರ್ಗದಲ್ಲಿ ಹೋದದ್ದೇ ಆದರೆ ಪೂರ್ವ ಭಾಗವನ್ನು ಇಡೀ ಪಾಕಿಸ್ತಾನದ

ಕಣಜವನ್ನಾಗಿ ಮಾರ್ಪಡಿಸಬಹುದು". ಇದು ಪೂರ್ವ ಪಾಕಿಸ್ತಾನದ ಕೃಷಿ ಸಂಪತ್ತಿನ ದ್ಯೋತಕವಾಗಿದೆ.

ಕೈಗಾರಿಕಾ ಕ್ಷೇತ್ರದಲ್ಲಿ ದೇಶದ ಎರಡೂ ಭಾಗಗಳಲ್ಲಿ ಹೆಚ್ಚು ಕಡಿಮೆ ಒಂದೇ ರೀತಿಯ ಅನುಕೂಲ ಅಥವಾ ಅನಾನುಕೂಲಗಳಿದ್ದವು. ಎರಡೂ ಭಾಗಗಳಲ್ಲಿ ಕೈಗಾರಿಕೆಗೆ ಅವಶ್ಯವಾದ ಕಚ್ಚಾವಸ್ತುಗಳು ಮತ್ತು ಖನಿಜಗಳ ಕೊರತೆಯಿತ್ತು. ಹತ್ತಿ ಮತ್ತು ಸಣಬನ್ನು ಬಿಟ್ಟರೆ ಇತರೆ ಯಾವ ಕಚ್ಚಾ ವಸ್ತುಗಳೂ ಗಣನೀಯ ಪ್ರಮಾಣದಲ್ಲಿ ಇರುವದಿಲ್ಲ. ಆದ್ದರಿಂದ ಪಶ್ಚಿಮ ಪಾಕಿಸ್ತಾನದವರಿಗೆ ಕೈಗಾರಿಕಾ ಕ್ಷೇತ್ರದಲ್ಲಿಯೂ ಪೂರ್ವದವರಿಗಿಂತ ಹೆಚ್ಚು ಸೌಲಭ್ಯಗಳೇನೂ ಇರಲಿಲ್ಲ. ಹೀಗಾಗಿ ಪೂರ್ವ ಪಾಕಿಸ್ತಾನದ ಸಂಪನ್ಮೂಲಗಳೇ ಪಶ್ಚಿಮ ಪಾಕಿಸ್ತಾನದ ಆಧಾರಗಳಾದವು. ಪಾಕಿಸ್ತಾನದ ಕೇಂದ್ರ ಸರಕಾರವು ಮೊದಲಿನಿಂದಲೂ ಆರ್ಥಿಕವಾಗಿ ಪೂರ್ವ ಪಾಕಿಸ್ತಾನದ ಶೋಷಣೆಯ ನೀತಿಯನ್ನನುಸರಿಸುತ್ತಾ ಬಂದು ಅದನ್ನು ಕೊನೆಯವರೆಗೂ ಬಿಡಲಿಲ್ಲ. ಸುಮಾರು ಇಪ್ಪತ್ನಾಲ್ಕು ವರ್ಷಗಳ ಅವಧಿಯಲ್ಲಿ ತನ್ನ ದೇಶದ ಭಾಗವೇ ಆಗಿದ್ದ ಸಂಪದ್ಭರಿತ ಪೂರ್ವ ಬಂಗಾಲದ ಲೂಟಿ ಮಾಡಿ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವಂತಹ ಅನೀತಿಯನ್ನು ಪಾಕಿಸ್ತಾನ ಸರಕಾರ ಪಾಲಿಸುತ್ತಾ ಬಂದಿತು. ಪಾಕಿಸ್ತಾನದ ಆರ್ಥಿಕ ನೀತಿಯ ಪರಿಚಯವಾದಾಗ ಈ ಶೋಷಣೆಯ ಪ್ರಮಾಣ ಮತ್ತು ಅದರ ದುಷ್ಪರಿಣಾಮಗಳ ಪರಿಚಯವಾದೀತು.

## ಆರ್ಥಿಕ ಬೆಳವಣಿಗೆ ಮತ್ತು ಪ್ರಾದೇಶಿಕ ಆದಾಯ

ಒಂದು ದೇಶದ ಆರ್ಥಿಕ ಬೆಳವಣಿಗೆಯನ್ನು ತಿಳಿದುಕೊಳ್ಳಬೇಕಾದರೆ ಆ ದೇಶದ ಒಟ್ಟು ಆದಾಯ, ತಲಾ ಆದಾಯ. ಒಟ್ಟು ಉತ್ಪಾದನೆ, ಆಯಾತ-ನಿರ್ಯಾತದ ಪ್ರಮಾಣ ಮುಂತಾದ ವಿಷಯಗಳನ್ನು ಗಮನಿಸಬೇಕಾಗುತ್ತದೆ. ಪಾಕಿಸ್ತಾನದಲ್ಲಿ ಅದು ಉದಯವಾದಂದಿನಿಂದ ಪಶ್ಚಿಮ ಭಾಗದಲ್ಲಿ ಪೂರ್ವ ಭಾಗಕ್ಕಿಂತಲೂ ಹೆಚ್ಚು ಪ್ರಮಾಣದ ಆರ್ಥಿಕ ಪ್ರಗತಿಯನ್ನು ಕಾಣುತ್ತೇವೆ. ಪಶ್ಚಿಮ ಪಾಕಿಸ್ತಾನದ ಸಂಪನ್ಮೂಲಗಳು ಮತ್ತು ಬೆಳವಣಿಗೆಗೆ ಅವಶ್ಯವೆನಿಸಿದ ಇತರ ವಿಷಯಗಳನ್ನು ಗಣನೆಗೆ ತೆಗೆದುಕೊಂಡಾಗ ಈ ಭಾಗದಲ್ಲಿಯೇ ಆದ ಹೆಚ್ಚಿನ ಬೆಳವಣಿಗೆಯನ್ನು ವಿವರಿಸುವದು ಕಷ್ಟ. ಅಲ್ಲಿ ಆಗಿರುವ ಆರ್ಥಿಕ ಬೆಳವಣಿಗೆ ಪೂರ್ವ ಭಾಗಕ್ಕಿಂತಲೂ ಹೆಚ್ಚಾಗಿರುವದು ಅಸಂಗತ ವಿಷಯ. ಏಕೆಂದರೆ ಪೂರ್ವ ಭಾಗದಲ್ಲಿ ತೀವ್ರಗತಿಯ ಆರ್ಥಿಕ ಬೆಳವಣಿಗೆಯಾಗಲು ಬೇಕಾಗುವ ಸಾಧನಗಳಿದ್ದೂ ಕೂಡ ಅಲ್ಲಿ ಬೆಳವಣಿಗೆ ಕುಂಠಿತವಾಯಿತು. ೧೯೪೭ ರಿಂದ ೧೯೫೦ ರ ಅವಧಿಯಲ್ಲಿ ಪೂರ್ವ ಪಾಕಿಸ್ತಾನದ ಆದಾಯವು ಪಶ್ಚಿಮಕ್ಕಿಂತ ಹೆಚ್ಚಾಗಿದ್ದಿತು. ಈ ಕೆಳಗಿನ ಅಂಕಿ ಅಂಶಗಳಿಂದ ಇದು ಸ್ಪಷ್ಟವಾಗುತ್ತದೆ:

## ಪೂರ್ವ ಮತ್ತು ಪಶ್ಚಿಮ ಪಾಕಿಸ್ತಾನಗಳ ಒಟ್ಟು ಪ್ರಾದೇಶಿಕ ಉತ್ಪಾದನೆ

(ಅಂಕಿಗಳು ಕೋಟಿ ರೂಪಾಯಿಗಳಲ್ಲಿ)

| ಕ್ಷೇತ್ರ | ಪೂರ್ವ ಪಾಕಿಸ್ತಾನ | | | ಪಶ್ಚಿಮ ಪಾಕಿಸ್ತಾನ | | |
|---|---|---|---|---|---|---|
| | ೧೯೪೯–೫೦ | ೧೯೫೯–೬೦ | ೧೯೬೪–೬೫ | ೧೯೪೯–೫೦ | ೧೯೫೯–೬೦ | ೧೯೬೪–೬೫ |
| ೧, ಒಕ್ಕಲುತನ | ೮೦೭.೪ | ೯೦೪.೨ | ೧೦೭೭.೪ | ೬೫೯.೫ | ೭೭೧.೧ | ೯೧೨.೪ |
| ೨.ಗಣಿ ಮುಂತಾದವು | — | — | — | ೨.೭ | ೭.೦ | ೧೧.೫ |
| ೩. ಸಿದ್ಧ ವಸ್ತುಗಳ ತಯಾರಿಕೆ | ೪೭.೨ | ೯೧.೨ | ೧೫೩.೬ | ೯೬.೧ | ೨೦೧.೮ | ೨೯೦.೪ |
| ೪. ನಿರ್ಮಾಣ ಕಾರ್ಯ | ೫.೮ | ೨೨.೪ | ೮೦.೬ | ೧೭.೯ | ೪೨.೭ | ೯೬.೨ |

| | | | | | | |
|---|---|---|---|---|---|---|
| ೫. ವಿದ್ಯುತ್, ಅನಿಲ ಮತ್ತು ನೀರು | ೦.೬ | ೨.೦ | ೧೧.೩ | ೨.೭ | ೮.೭ | ೧೫.೪ |
| ೬. ಸಾರಿಗೆ ಸಂಪರ್ಕ | ೬೩.೧ | ೯೦.೦ | ೧೧೮.೮ | ೬೦.೮ | ೯೨.೧ | ೧೨೨.೮ |
| ೭. ವಾಣಿಜ್ಯ, ಹಣ ಕಾಸು ಮತ್ತು ಇತರ | ೩೧೩.೩ | ೩೮೭.೪ | ೫೦೦.೦ | ೩೬೯.೪ | ೫೨೩.೩ | ೬೭೫.೦ |
| ಒಟ್ಟು ಪ್ರಾದೇಶಿಕ ಉತ್ಪಾದನೆ | ೧೨೩೭.೪ | ೧೪೯೭.೨ | ೧೯೪೧.೭ | ೧೨೦೯.೧ | ೧೬೪೬.೭ | ೨೧೨೪.೮ |

( ಆಧಾರ : **Pakistan Development Review, 1966**. )

ಪೂರ್ವ ಪಾಕಿಸ್ತಾನದ ಒಟ್ಟು ಪ್ರಾದೇಶಿಕ ಆದಾಯವು ೧೯೫೩–೫೪ ರ ವರೆಗೆ ಪಶ್ಚಿಮಕ್ಕಿಂತ ಹೆಚ್ಚಾಗಿಯೇ ಇದ್ದಿತು. ಆದರೆ ೧೯೫೪–೫೫ ರಿಂದ ಪಶ್ಚಿಮ ಪಾಕಿಸ್ತಾನದ ಆದಾಯವು ಹೆಚ್ಚುತ್ತಾ ಹೋಯಿತು. ಈ ಪ್ರಾದೇಶಿಕ ಆದಾಯದಲ್ಲಿನ ವ್ಯತ್ಯಾಸವು ೧೯೬೫–೭೦ ರ ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಇನ್ನೂ ಹೆಚ್ಚಾಗಿದ್ದನ್ನು ಈ ಕೆಳಗಿನ ಅಂಕಿ-ಅಂಶಗಳಿಂದ ಅರಿತುಕೊಳ್ಳಬಹುದಾಗಿದೆ:

( ಅಂಕಿಗಳು ಕೋಟಿ ರೂಪಾಯಿಗಳಲ್ಲಿ )

| ಅವಧಿ | ಪೂರ್ವ ಪಾಕಿಸ್ತಾನ | ಪಶ್ಚಿಮ ಪಾಕಿಸ್ತಾನ |
|---|---|---|
| ೧೯೬೫–೬೬ | ೧೯೫೩.೭ | ೨೨೪೩.೨ |
| ೧೯೬೬–೬೭ | ೨೦೫೩.೭ | ೨೪೫೯.೬ |
| ೧೯೬೭–೬೮ | ೨೧೪೨.೯ | ೨೭೦೮.೨ |
| ೧೯೬೮–೬೯ × | ೨೨೩೭.೫ | ೨೮೯೧.೨ |
| ೧೯೬೯–೭೦ × | ೨೨೭೧.೩ | ೩೧೫೭.೩ |

( X ಸ್ಥೂಲ ಅಂದಾಜು ) [ ಆಧಾರ: **Pakistan Economic survey 1969–70. Performance statistics of west-Pakistan 1969, Govt of West Pakistan** ]

ಮೊದಲಿನಿಂದಲೂ ಪಶ್ಚಿಮದವರು ಸರಕಾರವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ರಾಜಕೀಯ ನಾಯಕತ್ವವನ್ನು ತಮ್ಮ ಕೈಯಲ್ಲಿಯೇ ಇಟ್ಟುಕೊಂಡದ್ದರಿಂದ ಆ ಭಾಗದವರಿಗೆ ರಾಷ್ಟ್ರದ ಆರ್ಥಿಕ ವ್ಯವಸ್ಥೆಯನ್ನು ತಮಗೆ ಬೇಕಾದ, ಹಾಗೂ ತಮಗೆ ಅನುಕೂಲವಾಗುವ ರೀತಿಯಲ್ಲಿ ರೂಪಿಸುವದು ಸಾಧ್ಯವಾಯಿತು. ಪೂರ್ವ ಪಾಕಿಸ್ತಾನವನ್ನು ಮೊದಲಿನಿಂದಲೂ ತಮ್ಮ ವಸಾಹತು ವನ್ನಾಗಿ ಉಪಯೋಗಿಸಿಕೊಂಡರು. ಎಂದರೆ ಪೂರ್ವ ಪಾಕಿಸ್ತಾನದ

ಆರ್ಥಿಕ ಅವಶ್ಯಕತೆಗಳನ್ನು ಮತ್ತು ಬೆಳವಣಿಗೆಯನ್ನು ಮೊದಲಿನಿಂದಲೂ ಕಡೆಗಣಿಸಲಾಗಿದ್ದು ಅವರ ಸಂಪನ್ಮೂಲಗಳು ಪಶ್ಚಿಮದ ಅಭಿವೃದ್ಧಿಗಾಗಿಯೇ ಇವೆಯೋ ಏನೋ ಎಂಬ ಭಾವನೆ ಮೂಡಿತು. ಪಶ್ಚಿಮದವರು ಪೂರ್ವದವರನ್ನು ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಕೀಳು ಭಾವನೆಯಿಂದಲೇ ಕಾಣುತ್ತಿದ್ದುದನ್ನು ಇಲ್ಲಿ ನೆನೆಯಬಹುದು.

ಪೂರ್ವ ಪಾಕಿಸ್ತಾನದಲ್ಲಿ ದೇಶದ ಶೇಕಡಾ ೫೫ ರಷ್ಟು ಜನಸಂಖ್ಯೆಯಿದ್ದರೂ ಪಾಕಿಸ್ತಾನದ ಕೇಂದ್ರ ರಾಜಧಾನಿ 'ಕರಾಚಿ'ಯಾಯಿತೇ ಹೊರತು 'ಢಾಕಾ' ಆಗಲಿಲ್ಲ. ಬಹುಸಂಖ್ಯಾತ ಜನ ಬಂಗಾಲಿ ಭಾಷೆಯಾಡುವವರಿದ್ದರೂ ಉರ್ದುವೇ ರಾಷ್ಟ್ರಭಾಷೆ ಎಂದು ಸಾರಲಾಯಿತು. ಆರ್ಥಿಕ ರಂಗದಲ್ಲಿಯೂ ಕೂಡ ಹೆಚ್ಚು ಜನಸಂಖ್ಯೆ ಇರುವ ಪೂರ್ವ ಪಾಕಿಸ್ತಾನಕ್ಕೆ ಆದಾಯದಲ್ಲಿನ ಹೆಚ್ಚು ಭಾಗವನ್ನು ವಿನಿಯೋಗಿಸದೇ ಕಡಿಮೆ ಜನಸಂಖ್ಯೆ ಇರುವ ಪಶ್ಚಿಮ ಪಾಕಿಸ್ತಾನದಲ್ಲಿಯೇ ಹೆಚ್ಚು ಹಣವನ್ನು ಖರ್ಚು ಮಾಡಲಾಯಿತು. ಈ ಅನೀತಿಯುತ ತಾರತಮ್ಯ ನೀತಿಯಿಂದಲೇ ಪೂರ್ವ ಪಾಕಿಸ್ತಾನದವರು ಬೇಸತ್ತು ದಂಗೆ ಎದ್ದರು. ಈ ಕೆಳಗೆ ಕೊಟ್ಟಿರುವ ಅಭಿವೃದ್ಧಿ ಪಟ್ಟದ ಅಂಕಿ-ಅಂಶಗಳಿಂದ ಈ ತಾರತಮ್ಯ ನೀತಿಯು ಅರಿವಾಗುವದು:

( ಅಂಕಿಗಳು ಕೋಟಿ ರೂಪಾಯಿಗಳಲ್ಲಿ )

| ಅವಧಿ | ಪೂರ್ವ ಪಾಕಿಸ್ತಾನ | ಪಶ್ಚಿಮ ಪಾಕಿಸ್ತಾನ |
|---|---|---|
| ೧೯೬೫–೬೬ | ೧೯೫೩.೭ | ೨೨೪೩.೨ |
| ೧೯೬೬–೬೭ | ೨೦೫೩.೭ | ೨೪೫೯.೬ |
| ೧೯೬೭–೬೮ | ೨೦೪೨.೯ | ೨೭೦೮.೨ |
| ೧೯೬೮–೬೯ × | ೨೨೩೭.೫ | ೨೮೯೦.೨ |
| ೧೯೬೯–೭೦ × | ೨೨೭೧.೩ | ೩೧೫೭.೩ |

( X ಸ್ಥೂಲ ಅಂದಾಜು ) [ ಆಧಾರ: **Pakistan Economic survey 1969–70. Performance statistics of west-Pakistan 1969, Govt of West Pakistan** ]

ಮೊದಲಿನಿಂದಲೂ ಪಶ್ಚಿಮದವರು ಸರಕಾರವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ರಾಜಕೀಯ ನಾಯಕತ್ವವನ್ನು ತಮ್ಮ ಕೈಯಲ್ಲಿಯೇ ಇಟ್ಟುಕೊಂಡದ್ದರಿಂದ ಆ ಭಾಗದವರಿಗೆ ರಾಷ್ಟ್ರದ ಆರ್ಥಿಕ ವ್ಯವಸ್ಥೆಯನ್ನು ತಮಗೆ ಬೇಕಾದ, ಹಾಗೂ ತಮಗೆ ಅನುಕೂಲವಾಗುವ ರೀತಿಯಲ್ಲಿ ರೂಪಿಸುವದು ಸಾಧ್ಯವಾಯಿತು. ಪೂರ್ವ ಪಾಕಿಸ್ತಾನವನ್ನು ಮೊದಲಿನಿಂದಲೂ ತಮ್ಮ ವಸಾಹತು ವನ್ನಾಗಿ ಉಪಯೋಗಿಸಿಕೊಂಡರು. ಎಂದರೆ ಪೂರ್ವ ಪಾಕಿಸ್ತಾನದ

ಆರ್ಥಿಕ ಅವಶ್ಯಕತೆಗಳನ್ನು ಮತ್ತು ಬೆಳವಣಿಗೆಯನ್ನು ಮೊದಲಿನಿಂದಲೂ ಕಡೆಗಣಿಸಲಾಗಿದ್ದು ಅದರ ಸಂಪನ್ಮೂಲಗಳು ಪಶ್ಚಿಮದ ಅಭಿವೃದ್ಧಿಗಾಗಿಯೇ ಇವೆಯೋ ಏನೋ ಎಂಬ ಭಾವನೆ ಮೂಡಿತು. ಪಶ್ಚಿಮದವರು ಪೂರ್ವದವರನ್ನು ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಕೀಳು ಭಾವನೆಯಿಂದಲೇ ಕಾಣುತ್ತಿದ್ದುದನ್ನು ಇಲ್ಲಿ ನೆನೆಯಬಹುದು.

ಪೂರ್ವ ಪಾಕಿಸ್ತಾನದಲ್ಲಿ ದೇಶದ ಶೇಕಡಾ ೫೫ ರಷ್ಟು ಜನಸಂಖ್ಯೆಯಿದ್ದರೂ ಪಾಕಿಸ್ತಾನದ ಕೇಂದ್ರ ರಾಜಧಾನಿ 'ಕರಾಚಿ' ಯಾಯಿತೇ ಹೊರತು 'ಢಾಕಾ' ಆಗಲಿಲ್ಲ. ಬಹುಸಂಖ್ಯಾತ ಜನ ಬಂಗಾಲಿ ಭಾಷೆಯಾಡುವವರಿದ್ದರೂ ಉರ್ದುವೇ ರಾಷ್ಟ್ರಭಾಷೆ ಎಂದು ಸಾರಲಾಯಿತು. ಆರ್ಥಿಕ ರಂಗದಲ್ಲಿಯೂ ಕೂಡ ಹೆಚ್ಚು ಜನಸಂಖ್ಯೆ ಇರುವ ಪೂರ್ವ ಪಾಕಿಸ್ತಾನಕ್ಕೆ ಆದಾಯದಲ್ಲಿನ ಹೆಚ್ಚು ಭಾಗವನ್ನು ವಿನಿಯೋಗಿಸದೇ ಕಡಿಮೆ ಜನಸಂಖ್ಯೆ ಇರುವ ಪಶ್ಚಿಮ ಪಾಕಿಸ್ತಾನದಲ್ಲಿಯೇ ಹೆಚ್ಚು ಹಣವನ್ನು ಖರ್ಚು ಮಾಡಲಾಯಿತು. ಈ ಅನೀತಿಯುತ ತಾರತಮ್ಯ ನೀತಿಯಿಂದಲೇ ಪೂರ್ವ ಪಾಕಿಸ್ತಾನದವರು ಬೇಸತ್ತು ದಂಗೆ ಎದ್ದರು. ಈ ಕೆಳಗೆ ಕೊಟ್ಟಿರುವ ಅಭಿವೃದ್ಧಿ ಪಟ್ಟದ ಅಂಕಿ-ಅಂಶಗಳಿಂದ ಈ ತಾರತಮ್ಯ ನೀತಿಯು ಅರಿವಾಗುವದು:

## ಯೋಜನೆಗಳಲ್ಲಿ ಸಾರ್ವಜನಿಕ ಅಭಿವೃದ್ಧಿ ವೆಚ್ಚ

( ಅಂಕಿಗಳು ಕೋಟಿ ರೂಪಾಯಿಗಳಲ್ಲಿ )

| ಅವಧಿ | ಪೂರ್ವ ಪಾಕಿಸ್ತಾನ | ಪಶ್ಚಿಮ ಪಾಕಿಸ್ತಾನ |
|---|---|---|
| ಯೋಜನೆಗಿಂತ ಮೊದಲು (೧೯೫೦–೫೫) | ೯೪.೦ (೩೧.೩%) | ೨೦೬.೫ (೬೮.೭%) |
| ಮೊದಲನೇ ಪಂಚ ವಾರ್ಷಿಕ ಯೋಜನೆ (೧೯೫೫–೬೦) | ೧೯೭.೦ (೨೯.೮%) | ೪೬೩.೦ (೭೦.೨%) |
| ಎರಡನೇ ಪಂಚ ವಾರ್ಷಿಕ ಯೋಜನೆ (೧೯೬೦–೬೫) | ೬೨೫.೫ (೪೪.೮%) | ೭೬೯.೫ (೫೫.೨%) |
| ಮೂರನೇ ಪಂಚ ವಾರ್ಷಿಕ ಯೋಜನೆ (೧೯೬೫–೭೦) | ೧೧೫೭.೫ (೫೨.೯%) | ೧೦೨೯.೫ (೪೭.೧%) |

ಜನಸಂಖ್ಯೆಯ ಆಧಾರದ ಮೇಲೆ ಹಣ ವಿನಿಯೋಗ ಮಾಡಿದ್ದರೂ ಕೂಡ ಪೂರ್ವ ಪಾಕಿಸ್ತಾನಕ್ಕೆ ಒಟ್ಟು ಹಣದಲ್ಲಿ ಪ್ರತಿಶತ ೫೫ ರಷ್ಟಾದರೂ ದೊರೆಯಬೇಕಾಗಿತ್ತು. ಇದೂ ಅಲ್ಲದೇ

ಎರಡೂ ಭಾಗಗಳ ನಡುವಣ ಆರ್ಥಿಕ ವ್ಯತ್ಯಾಸವನ್ನು ಸರಿತೂಗಿಸುವ ನೀತಿಯನ್ನನುಸರಿಸಿದ್ದರೆ ಪ್ರತಿಶತ ೫೫ಕ್ಕಿಂತ ಹೆಚ್ಚು ಹಣ ಪೂರ್ವ ಪಾಕಿಸ್ತಾನಕ್ಕೆ ದೊರೆಯಬೇಕಾಗಿತ್ತು. ಯಾವ ಯೋಜನೆಯ ಅವಧಿಯಲ್ಲಿಯೂ ಅವರಿಗೆ ತಮಗೆ ನ್ಯಾಯವಾಗಿ ದೊರೆಯಬೇಕಾದಷ್ಟು ಹಣ ದೊರೆಯಲಿಲ್ಲವೆಂಬುದು ಮೇಲಿನ ಅಂಕಿ-ಅಂಶಗಳಿಂದ ಸ್ಪಷ್ಟವಾಗುತ್ತದೆ,

**ಕರಭಾರ :**

ಇದುವರೆಗೆ ಆರ್ಥಿಕ ಬೆಳವಣಿಗೆಯ ದೃಷ್ಟಿಯಿಂದ ಪೂರ್ವ ಭಾಗವನ್ನು ಎಷ್ಟರ ಮಟ್ಟಿಗೆ ಕಡೆಗಾಣಿಸಲಾಗಿತ್ತೆಂಬುದನ್ನು ವಿವರಿಸಲಾಯಿತು. ಆದರೆ ಈ ಮಲತಾಯಿ ಧೋರಣೆ ಇಷ್ಟಕ್ಕೇ ನಿಲ್ಲಲಿಲ್ಲ. ಅಭಿವೃದ್ಧಿಯನ್ನು ಕಡೆಗಣಿಸುವದು ಒಂದು ಭಾಗವಾದರೆ ಪೂರ್ವ ಪಾಕಿಸ್ತಾನದ ಸಂಪನ್ಮೂಲಗಳನ್ನು ದೋಚಿ ಆ ಭಾಗದ ಶೋಷಣೆ ನಡೆಸಿರುವದು ಈ ಕಥೆಯ ಇನ್ನೊಂದು ಭಾಗವಾಗಿದೆ. ಪೂರ್ವ ಪಾಕಿಸ್ತಾನದ ಅಭಿವೃದ್ಧಿಗಾಗಿ ಒಟ್ಟು ಅಭಿವೃದ್ಧಿ ವೆಚ್ಚದ ಶೇಕಡಾ ೩೦–೪೦ ರಷ್ಟನ್ನು ಮಾತ್ರ ವೆಚ್ಚ ಮಾಡಲಾಗಿತ್ತು.ಆದರೆ ಇಷ್ಟು ಕಡಿಮೆ ಹಣವನ್ನು ಅಭಿವೃದ್ಧಿಗಾಗಿ ಪಡೆದ ಪೂರ್ವದವರ ಮೇಲೆ ಶೇಕಡಾ ೫೦ ಕ್ಕಿಂತಲೂ ಹೆಚ್ಚು ಕರಭಾರವನ್ನು ಹೇರಲಾಗಿತ್ತು. ಈ ಅಂಶವು ಕೆಳಗಿನ ಪಟ್ಟಿಯಿಂದ ಸ್ಪಷ್ಟವಾಗುತ್ತದೆ:

## ಕೇಂದ್ರ ಕರಭಾರದ ಪ್ರಾದೇಶಿಕ ಪ್ರಮಾಣ

( ಅಂಕಿಗಳು ಕೋಟಿ ರೂಪಾಯಿಗಳಲ್ಲಿ )

| ಅವಧಿ | ಪೂರ್ವ ಪಾಕಿಸ್ತಾನ | ಪಶ್ಚಿಮ ಪಾಕಿಸ್ತಾನ |
|---|---|---|
| ೧೯೬೫–೬೬ | ೫೩.೮೭ | ೫೩.೧೩ |
| ೧೯೬೬–೬೭ | ೬೧.೭೦ | ೬೦.೭೦ |
| ೧೯೬೭–೬೮ | ೫೭.೨೯ | ೫೪.೫೬ |
| ೧೯೬೮–೬೯ | ೫೭.೧೭ | ೫೬.೭೫ |
| ೧೯೬೯–೭೦ | ೬೨.೦೫ | ೬೧.೬೮ |

ಪ್ರತಿ ವರುಷದ ಕರಾಕರಣೆಯಲ್ಲಿ ಪೂರ್ವ ಪಾಕಿಸ್ತಾನದವರೇ ಪಶ್ಚಿಮದವರಿಗಿಂತ ಹೆಚ್ಚು ಕರ ತೆತ್ತಿರುವದು ಇದರಿಂದ ಸ್ಪಷ್ಟವಾಗುತ್ತದೆ. ಇನ್ನು ವಿದೇಶ ವ್ಯವಹಾರದಲ್ಲಿಯಾದರೂ ಇದೇ ರೀತಿಯ ತಾರತಮ್ಯ ಕಂಡುಬರುತ್ತದೆ.

### ವಿದೇಶಿ ವಿನಿಮಯ :

ಕರಾಕರಣೆಯಂತೆ ವಿದೇಶಿ ವಿನಿಮಯವೂ ಒಂದು ರಾಷ್ಟ್ರದ ಆದಾಯದ ಇನ್ನೊಂದು ಮುಖ್ಯ ಅಂಶವಾಗಿದೆ. ಪಶ್ಚಿಮ ಪಾಕಿಸ್ತಾನದವರಿಗೆ ಪೂರ್ವ ಪಾಕಿಸ್ತಾನವು ವಿದೇಶಿವಿನಿಮಯವೆಂಬ

ಚಿನ್ನದ ಪೆಟ್ಟಿಯನ್ನಿಡುವ ಕೋಳಿಯಂತಿದ್ದಿತು. ಪಾಕಿಸ್ತಾನದ ಎರಡು ಭಾಗಗಳ ಆಯಾತ ನಿರ್ಯಾತ ಪ್ರಮಾಣವನ್ನು ಮತ್ತು ಅದರಿಂದ ದೊರೆತ ಆದಾಯದ ಅಂಕಿಸಂಖ್ಯೆಗಳನ್ನು ತಿಳಿದು ಕೊಂಡರೆ ಇದರ ಸತ್ಯತೆಯು ಅರಿವಾಗುವದು.

**ಪೂರ್ವ ಮತ್ತು ಪಶ್ಚಿಮ ಪಾಕಿಸ್ತಾನಗಳ**
**ಆಯಾತ ನಿರ್ಯಾತ ಪ್ರಮಾಣ** ( ವಾರ್ಷಿಕ ಸರಾಸರಿ )
( ಅಂಕಿಗಳು ಕೋಟಿ ರೂಪಾಯಿಗಳಲ್ಲಿ )

| ಪ್ರದೇಶ | ಯೋಜನೆಗೆ ಪೂರ್ವ ೧೯೫೦–೫೫ | ಮೊದಲನೆ ಪಂಚವಾರ್ಷಿಕ ಯೋಜನೆ ೧೯೫೫–೬೦ | ಎರಡನೆ ಪಂಚವಾರ್ಷಿಕ ಯೋಜನೆ ೧೯೬೦–೬೫ |
|---|---|---|---|
| **ಪೂರ್ವ ಪಾಕಿಸ್ತಾನ** | | | |
| ಪರದೇಶಗಳಿಂದ ಆಯಾತ | ೪೩.೯೪ | ೬೨.೪೮ | ೧೨೧.೯೨ |
| ಪ. ಪಾಕಿಸ್ತಾನದಿಂದ ಆಯಾತ | ೨೮.೭೮ | ೫೬.೪೩ | ೮೮.೧೫ |
| ಒಟ್ಟು ... | ೭೨.೭೨ | ೧೧೮.೯೧ | ೨೧೦.೦೭ |
| ಪರದೇಶಗಳಿಗೆ ನಿರ್ಯಾತ | ೮೬.೩೪ | ೯೭.೯೮ | ೧೨೬.೦೩ |
| ಪ. ಪಾಕಿಸ್ತಾನಕ್ಕೆ ನಿರ್ಯಾತ | ೧೨.೫೭ | ೨೮.೦೬ | ೪೫.೭೦ |
| ಒಟ್ಟು... | ೯೮.೯೧ | ೧೨೬.೪ | ೧೭೧.೭೩ |

| ಪ್ರದೇಶ | ಯೋಜನೆಗೆ ಪೂರ್ವ ೧೯೫೦.೫೫ | ಮೊದಲನೆ ಪಂಚವಾರ್ಷಿಕ ಯೋಜನೆ ೧೯೫೫–೬೦ | ಎರಡನೆ ಪಂಚವಾರ್ಷಿಕ ಯೋಜನೆ ೧೯೬೦–೬೫ |
|---|---|---|---|
| **ಪಶ್ಚಿಮ ಪಾಕಿಸ್ತಾನ** | | | |
| ಪರದೇಶಗಳಿಂದ ಆಯಾತ | ೧೦೫.೩೧ | ೧೫೨.೫೦ | ೨೭೭.೨೭ |
| ಪೂ. ಪಾಕಿಸ್ತಾನದಿಂದ ಆಯಾತ | ೧೨.೫೭ | ೨೮.೦೬ | ೪೮.೭೦ |
| ಒಟ್ಟು.... | ೧೧೭.೮೮ | ೧೮೦.೫೬ | ೩೨೫.೯೭ |
| ಪರದೇಶಗಳಿಂದ ನಿರ್ಯಾತ | ೮೫.೨೮ | ೬೧.೬೩ | ೮೫.೭೨ |
| ಪೂರ್ವ ಪಾಕಿಸ್ತಾನಕ್ಕೆ ನಿರ್ಯಾತ | ೨೮.೭೮ | ೫೬.೪೩ | ೮೮.೧೫ |
| ಒಟ್ಟು .... | ೧೧೪.೦೬ | ೧೧೮.೦ ೬ | ೧೭೩.೮೭ |

ಆಧಾರ : **Pakistan C. S. O. Bulletin and Economic Survey- 1966-67.**

ಈ ಕೋಷ್ಟಕದಿಂದ ಎರಡು ವಿಷಯಗಳು ಸ್ಪಷ್ಟವಾಗುತ್ತವೆ. (೧) ಈ ಅವಧಿಯಲ್ಲಿ ಪೂರ್ವ ಪಾಕಿಸ್ತಾನದ ಸಂಪನ್ಮೂಲಗಳನ್ನು ಹೆಚ್ಚಾಗಿ ಹೊರಗೆ ಕಳಿಸಲಾಯಿತು. ಅದರ ಆಯಾತಕ್ಕಿಂತ ನಿರ್ಯಾತ ಪ್ರಮಾಣ ಹೆಚ್ಚಾಗಿದ್ದಿತು. ಮತ್ತು ಪಶ್ಚಿಮ

ದವರು ಪೂರ್ವ ಭಾಗದಿಂದ ತಾವು ಕೊಳ್ಳುವದಕ್ಕಿಂತಲೂ ಹೆಚ್ಚು ಪ್ರಮಾಣದಲ್ಲಿ ವಸ್ತುಗಳನ್ನು ಅವರಿಗೆ ಮಾರುತ್ತಿದ್ದರು. ಮೇಲಾಗಿ ಪಶ್ಚಿಮ ಪಾಕಿಸ್ತಾನದಿಂದ ನಿರ್ಯಾತಕ್ಕಿಂತ ಆಯಾತದ ಪ್ರಮಾಣವೇ ಹೆಚ್ಚಾಗಿತ್ತು. ಹೆಚ್ಚಿನ ಪ್ರಮಾಣದ ಈ ಆಯಾತಕ್ಕೆ ಅವಶ್ಯವಾದ ಹಣದಲ್ಲಿ ಶೇಕಡಾ ೫೦ ಕ್ಕಿಂತಲೂ ಹೆಚ್ಚು ಹಣವನ್ನು ಪೂರ್ವದವರು ಪಶ್ಚಿಮದವರಿಗಾಗಿ ವಿದೇಶ ವಾಣಿಜ್ಯ ಗಳಿಕೆಯಿಂದ ತೆರುತ್ತಿದ್ದರು. ಪೂರ್ವ ಪಾಕಿಸ್ತಾನದವರು ತಾವು ಗಳಿಸುತ್ತಿದ್ದ ವಿದೇಶಿ ವಿನಿಮಯವೆಲ್ಲವನ್ನು ಪಾಕಿಸ್ತಾನದ ಕೇಂದ್ರ ಬ್ಯಾಂಕಿಗೆ ಪಾವತಿ ಮಾಡಿ ಅದರ ಬದಲು ರೂಪಾಯಿಗಳನ್ನು ಪಡೆಯಬೇಕಾಗಿತ್ತು. ಈ ರೀತಿ ದೊರೆತ ವಿದೇಶೀ ವಿನಿಮಯವನ್ನು ಪಶ್ಚಿಮ ಪಾಕಿಸ್ತಾನಕ್ಕೆ ಅವಶ್ಯವೆನಿಸಿದ ವಸ್ತುಗಳನ್ನು ಪರದೇಶಗಳಿಂದ ತರಿಸುವದಕ್ಕಾಗಿ ಖರ್ಚು ಮಾಡಲಾಗುತ್ತಿತ್ತು. ಇನ್ನೊಂದು ಅಂದಾಜಿನಂತೆ ಪಾಕಿಸ್ತಾನದ ಇಡೀ ವಿದೇಶಿ ವಿನಿಮಯ ಗಳಿಕೆಯಲ್ಲಿ ಪೂರ್ವ ಪಾಕಿಸ್ತಾನವೇ ಶೇಕಡಾ ೬೦ ರಷ್ಟನ್ನು ಗಳಿಸಿಕೊಡುತ್ತಿತ್ತು.

೨) ಎರಡನೆಯದಾಗಿ. ಈ ಅವಧಿಯಲ್ಲಿ ಪೂರ್ವ ಪಾಕಿಸ್ತಾನದಲ್ಲಿ ಉತ್ಪಾದಿಸಲಾದ ಸಂಪನ್ಮೂಲಗಳನ್ನು ಪಶ್ಚಿಮಕ್ಕೆ ವರ್ಗಾಯಿಸಲಾಗುತ್ತಿತ್ತು. ಇದರಿಂದ ಪೂರ್ವ ಭಾಗದ ಅಭಿವೃದ್ಧಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಸಾಧಿಸಲು ಅನುಕೂಲವಾಯಿತು.

ಕೊನೆಯದಾಗಿ. ಆರ್ಥಿಕ ಅಭಿವೃದ್ಧಿ ಪ್ರಮಾಣದ ಸೂಚಕವಾದ ತಲಾ ಆದಾಯವನ್ನು ಪರಿಶೀಲಿಸೋಣ. ವಿವಿಧ ಅಭಿ

ವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವದರ ಮೂಲಕ ಸರಾಸರಿ ಆದಾಯವನ್ನು ಹೆಚ್ಚಿಸುವದು ಸಾಧ್ಯ. ಇದು ಆಯಾ ದೇಶದ ಜೀವನ ಮಟ್ಟವನ್ನು ಸೂಚಿಸುವ ಸಾಧನವೂ ಆಗಿದೆ. ಪೂರ್ವ ಮತ್ತು ಪಶ್ಚಿಮ ಪಾಕಿಸ್ತಾನಗಳ ಸರಾಸರಿ ತಲಾ ಆದಾಯದ ವಿವರಗಳು ಹೀಗಿವೆ:–

**ಪಾಕಿಸ್ತಾನದ ಪ್ರಾದೇಶಿಕ ತಲಾ ಆದಾಯ**

( ಅಂಕಿಗಳು ರೂಪಾಯಿಗಳಲ್ಲಿ )

| ಅವಧಿ | ಪೂರ್ವ ಪಾಕಿಸ್ತಾನ | ಪಶ್ಚಿಮ ಪಾಕಿಸ್ತಾನ |
|---|---|---|
| ೧೯೪೯–೫೦ | ೨೯೩ | ೩೪೨ |
| ೧೯೫೪–೫೫ | ೨೯೦ | ೩೫೪ |
| ೧೯೫೯–೬೦ | ೨೭೮ | ೩೬೬ |
| ೧೯೬೪–೬೫ | ೩೦೦ | ೪೪೩ |
| ೧೯೬೯–೭೦ × | ೩೨೦ | ೫೪೬ |

( × ಸ್ಥೂಲ ಅಂದಾಜ )

ಈ ಅಂಕಿ ಅಂಶಗಳಿಂದ ಪೂರ್ವ ಪಾಕಿಸ್ತಾನದ ತಲಾ ಆದಾಯವು ಪ್ರಾರಂಭದಲ್ಲಿ ೨೯೩ ರೂಪಾಯಿಗಳು ಇದ್ದು ಅದು ಇಳಿಮುಖವಾ

ಗುತ್ತಾ ಹೋಗಿ ಕೊನೆಯಲ್ಲಿ ೩.೨೧ ರೂಪಾಯಿಗಳಿಗೆ ಮಾತ್ರ ಇಳಿದಿರುವದು ಕಾಣುತ್ತದೆ ! ಆದರೆ ಅದೇ ಪಶ್ಚಿಮದಲ್ಲಿ ಮೊದಲಿನಿಂದಲೂ ಅದು ಏರಿಕೆಯಲ್ಲಿದ್ದು ೩.೪೨ ರೂಪಾಯಿಗಳಿಂದ ೩.೪೭ ರೂಪಾಯಿಗಳಿಗೆ ಏರಿದ್ದು ಕಂಡುಬರುತ್ತದೆ. ಎಂದರೆ ೧೯೬೯–೭೦ ರಲ್ಲಿ ಪೂರ್ವದಲ್ಲಿ ಕಂಡುಬಂದ ೩.೨೧ ರೂಪಾಯಿಗಳ ತಲಾ ಆದಾಯವು ಪಶ್ಚಿಮ ಪಾಕಿಸ್ತಾನದ ೧೯೪೯–೫೦ ರ ಆದಾಯಕ್ಕಿಂತಲೂ ೨೧ ರೂಪಾಯಿನಷ್ಟು ಕಡಿಮೆಯಾಗಿರುವದು ಪಶ್ಚಿಮ ಪಾಕಿಸ್ತಾನದವರು ಪೂರ್ವದವರನ್ನು ಎಷ್ಟರ ಮಟ್ಟಿಗೆ ಶೋಷಿಸಿದರೆಂಬುದಕ್ಕೆ ಸಾಕ್ಷಿಯಾಗಿದೆ !! ಇಂತಹ ಶೋಷಕ ನೀತಿಯನ್ನು ಇಡೀ ಇಪ್ಪತ್ನಾಲ್ಕು ವರ್ಷಗಳಲ್ಲಿ ಸತತವಾಗಿ ಅನುಸರಿಸಿದರ ಫಲವಾಗಿ ಅಂದಿನ 'ಬಂಗಾರದ ಬಂಗ್ಲಾ' ಇಂದಿನ 'ಬಂಜರು ಬಂಗ್ಲಾ' ಆಗಿ ಪರಿವರ್ತಿತವಾಗಿದೆ !!! ಅದು ಇಂದು ಹಿಂಡಿ ಹಿಪ್ಪೆಮಾಡಿ ಎಸೆದ ಪ್ರದೇಶವಾಗಿದೆ ಎಂದರೆ ಉತ್ಪ್ರೇಕ್ಷೆ ಏನೂ ಇಲ್ಲ. ಇದೂ ಅಲ್ಲದೆ ಪಶ್ಚಿಮದವರಿಗೆ ಹೋಲಿಸಿದಾಗ ಪೂರ್ವದವರು ಅರೆ ಹಸಿದ, ಅರೆ ನಗ್ನ. ಅಶಿಕ್ಷಿತ ಜನರಾಗಿಯೇ ಉಳಿದರು. ರಾಜಕೀಯ, ಆರ್ಥಿಕ ಮತ್ತು ನಾಗರಿಕ ಹಾಗೂ ಮಿಲಿಟರಿ ಅಂಗಗಳಲ್ಲಿ ಸರಿಯಾದ ಪ್ರಾತಿನಿಧ್ಯವೂ ಇಲ್ಲದೆ ಅವರು ಕೊನೆಯತನಕ ಶೋಷಿತ, ನಿರುದ್ಯೋಗಿ, ಅನಕ್ಷರ, ರೋಗಪೀಡಿತ ಮತ್ತು ಹಸಿದ ಜನಾಂಗವಾಗಿಯೇ ಉಳಿದರು. ಇಡೀ ಅವಧಿಯಲ್ಲಿ ಪಾಕಿಸ್ತಾನದ ಕೇಂದ್ರ ಸೇವಾ ವೃಂದದಲ್ಲಿ ಪ್ರತಿಶತ '೧೫' ರಷ್ಟು ಹಾಗೂ ಮಿಲಿಟರಿಯಲ್ಲಿ ಪ್ರತಿಶತ '೧೦' ರಷ್ಟು ಮಾತ್ರ ಪೂರ್ವ ಪಾಕಿಸ್ತಾನದವರಿದ್ದರು.

ಪಾಕಿಸ್ತಾನದ ಈ ಮಲತಾಯಿ ಧೋರಣೆಯಿಂದಾಗಿ ಪೂರ್ವದವರು ತಮ್ಮ ದಿನ ನಿತ್ಯದ ಅವಶ್ಯಕತೆಗಳಿಗಾಗಿ ಪಶ್ಚಿಮದವರಿಗಿಂತ ಹೆಚ್ಚು ಬೆಲೆಯನ್ನು ತೆರಬೇಕಾಗಿತ್ತು. ಉದಾ—ಗೋದಿಯ ಬೆಲೆ ಪೂರ್ವದಲ್ಲಿ ಪ್ರತಿ ಮಣಕ್ಕೆ ೩೦ ರಿಂದ ೩೫ ರೂಪಾಯಿಗಳಿದ್ದರೆ, ಅದೇ ಪಶ್ಚಿಮದಲ್ಲಿ ೧೫ ರಿಂದ ೨೦ ರೂಪಾಯಿ ಮಾತ್ರ ಇದ್ದಿತು. ಇದೇ ರೀತಿ ಅಕ್ಕಿ, ಎಣ್ಣೆ ಮುಂತಾದ ಆಹಾರ ಪದಾರ್ಥಗಳ ಬೆಲೆಯಲ್ಲಿ ತಾರತಮ್ಯವಿದ್ದಿತು. ಇದರಿಂದ ಬಡವರ ಬವಣೆ ಹೇಳತೀರದಾಯಿತು. ಚಿನ್ನದ ಬೆಲೆಯಲ್ಲಿಯೂ ಸಹ ವ್ಯತ್ಯಾಸವಿಡಲಾಗಿತ್ತು. ಕರಾಚಿಯಲ್ಲಿ ಪ್ರತಿ ತೊಲೆಗೆ ೧೩೫ ರಿಂದ ೧೪೦ ರೂಪಾಯಿ ಇದ್ದರೆ, ಡಾಕಾದಲ್ಲಿ ಪ್ರತಿತೊಲೆಗೆ ೧೬೦ ರಿಂದ ೧೬೫ ರೂಪಾಯಿ ಇದ್ದಿತು. ಇವೆಲ್ಲ ಅಧಿಕೃತ ಬೆಲೆಗಳು. ಈ ಎಲ್ಲಾ ಅನ್ಯಾಯಗಳನ್ನು ತೊಡೆದುಹಾಕಿ ಪೂರ್ವ ಬಂಗಾಲಕ್ಕೆ ನ್ಯಾಯ ದೊರಕಿಸುವ ದೃಷ್ಟಿಯಿಂದಲೇ 'ಅವಾಮಿ ಲೀಗ್' ಪಕ್ಷವು ಜನಿಸಿತಲ್ಲದೆ ಅದು ಮೊದಲು ತನ್ನ ಹನ್ನೊಂದಂಶಗಳ ಮತ್ತು ನಂತರ ಆರು(೬)ಅಂಶಗಳ ಕಾರ್ಯಕ್ರಮವನ್ನು ಹಾಕಿಕೊಂಡಿತು. ಈ ಪ್ರಾದೇಶಿಕ ತಾರತಮ್ಯದ ವಿರುದ್ಧ ಚಳುವಳಿಯನ್ನು ಹೂಡಿ ಸ್ವಾಯತ್ತತೆಯ ಬೇಡಿಕೆಯನ್ನು ಮುಂದಿಟ್ಟಿತು. ಈ ಸ್ವಾಯತ್ತತೆಯ ಪೂರ್ಣ ಪರಿಚಯವು ಅವಾಮಿಲೀಗಿನ ಆರು ಅಂಶಗಳ ಪೂರ್ಣ ಪಾಠವನ್ನು ಓದಿದಾಗ ಆಗುವದು.

**ಆರು ಅಂಶಗಳು :**

೧) ಪಾಕಿಸ್ತಾನದ ಸಂವಿಧಾನವು ಸಂಯುಕ್ತ ರಾಜ್ಯ (Federal State)ಮತ್ತು ಸಂಸದೀಯ ಸರಕಾರ ಪದ್ಧತಿಯದಾಗಿದ್ದು ವಯಸ್ಕರ ಮತದಾನ ತತ್ವದ ಪ್ರಕಾರ ನೇರವಾಗಿ ಚುನಾಯಿತರಾದ ಪ್ರತಿನಿಧಿಗಳನ್ನೊಳಗೊಂಡ ಶಾಸನ ಸಭೆ ರಚಿತವಾಗಬೇಕು.

೨) ರಕ್ಷಣೆ ಮತ್ತು ವಿದೇಶಾಂಗ ವ್ಯವಹಾರಗಳು ಮಾತ್ರ ಕೇಂದ್ರ ಸರಕಾರಕ್ಕೆ ಸೇರಿದ ವಿಷಯಗಳಾಗಿರಬೇಕು.

೩) (i) ಪಾಕಿಸ್ತಾನದ ಎರಡು ಪ್ರದೇಶಗಳಿಗೆ ಪ್ರತ್ಯೇಕ ನಾಣ್ಯ ಪದ್ಧತಿ ಇದ್ದು ಅವೆರಡರಲ್ಲಿ ಪರಸ್ಪರ ಬದಲಾವಣೆಗೆ ಅವಕಾಶವಿರಬೇಕು. (ii) ಇಲ್ಲವೇ ಒಂದೇ ನಾಣ್ಯ ಪದ್ಧತಿ ಇದ್ದು ಪೂರ್ವ ಪ್ರದೇಶದ ಬಂಡವಾಳವು ಪಶ್ಚಿಮ ಪಾಕಿಸ್ತಾನಕ್ಕೆ ಹರಿದುಹೋಗದಂತೆ ಶಾಸನಬದ್ಧ ರಕ್ಷಣೆ ಇರಬೇಕು.

೪) ಕರ ಹೇರುವ ಮತ್ತು ಹಣವನ್ನು ಸಂಗ್ರಹಿಸುವ ಪ್ರತ್ಯೇಕ ಅಧಿಕಾರವು ಎರಡು ಘಟಕಗಳ ಸರಕಾರಗಳಿಗೆ ಇರಬೇಕು. ಕೇಂದ್ರ ಸರಕಾರಕ್ಕೆ ಈ ಘಟಕ ಸರಕಾರಗಳಿಂದ ತಮ್ಮ ತಮ್ಮ ಕರಾಕರಣೆಯ ಮೊಬಲಿಗಿನಿಂದ ನಿಗದಿ ಮಾಡಲಾದ ಭಾಗ ಮಾತ್ರ ದೊರೆಯಬೇಕು.

೫) ಪೂರ್ವ ಮತ್ತು ಪಶ್ಚಿಮ ಪಾಕಿಸ್ತಾನಗಳಿಗೆ ಪ್ರತ್ಯೇಕ ವಿದೇಶಿ ವಿನಿಮಯ ಲೆಖ್ಖಗಳನ್ನಿಡಬೇಕು. ಕೇಂದ್ರ ಸರಕಾರಕ್ಕೆ ಅವಶ್ಯಕವಾದ ವಿದೇಶಿ ವಿನಿಮಯವನ್ನು ಆಯಾ ಪ್ರದೇಶಗಳ

ಗಳಿಕೆಯ ಪ್ರಮಾಣ ಅಥವಾ ಇನ್ನಾವುದಾದರೂ ಆಧಾರದ ಮೇಲೆ ಕೊಡಬೇಕು.

೬) ಪೂರ್ವ ಪಾಕಿಸ್ತಾನದ ರಕ್ಷಣಾ ಅವಶ್ಯಕತೆಗಳನ್ನು ಪೂರೈಸಲು ಅಲ್ಲಿ ಒಂದು ಮಿಲಿಟರಿ ಅಕ್ಯಾಡೆಮಿ, ಮಿಲಿಟರಿ ಉತ್ಪಾದನಾ ಕೇಂದ್ರ ಮತ್ತು ನೌಕಾದಳದ ಕೇಂದ್ರ ಕಛೇರಿಯನ್ನು ಸ್ಥಾಪಿಸಬೇಕು. ಈ ಆರು ಅಂಶಗಳನ್ನು ಮಾನ್ಯ ಮಾಡಿದರೆ ಮಾತ್ರ ಪೂರ್ವದವರಿಗೆ ನ್ಯಾಯದೊರಕಲು ಸಾಧ್ಯವೆಂದು ಅವಾಮಿಲೀಗ್ ನಂಬಿದ್ದಿತು. ಆದರೆ ಪಾಕಿಸ್ತಾನದ ಕೇಂದ್ರ ಸರಕಾರವು ಈ ಬೇಡಿಕೆಗಳನ್ನು ತಿರಸ್ಕರಿಸಿ ಮಿಲಿಟರಿ ಬಲಪ್ರಯೋಗ ಮಾಡಲು ಹೇಸಲಿಲ್ಲ. ಇಂತಹ ದಾರುಣ ಪರಿಸ್ಥಿತಿಯಲ್ಲಿ ಅವರು ಪಾಕಿಸ್ತಾನದ ದುರಾಡಳಿತದ ವಿರುದ್ಧ ದಂಗೆ ಎದ್ದು ಪ್ರಾಣ ತ್ಯಾಗಕ್ಕೂ ಸಿದ್ಧರಾಗಿ ತಮ್ಮ ವಿಮೋಚನಾ ಸಂಗ್ರಾಮವನ್ನು ಸಾರಿದ್ದು ಸಹಜವೇ ಆಗಿದೆ. ಎಲ್ಲಕ್ಕಿಂತಲೂ ಮಿಗಿಲಾಗಿ ಪಶ್ಚಿಮ ಪಾಕಿಸ್ತಾನವು ತಮ್ಮ ಜಾತಿ ಬಾಂಧವರೇ ಆಗಿದ್ದ ಪೂರ್ವದವರನ್ನು ನಡೆಸಿಕೊಂಡ ರೀತಿಯನ್ನು ಪ್ರತಿಭಟಿಸಿ ತಮ್ಮ ಆತ್ಮಗೌರವವನ್ನು ಕಾಪಾಡಿಕೊಳ್ಳಲು ಈ ಸ್ವಾತಂತ್ರ್ಯ ಸಂಗ್ರಾಮವು ಸನ್ನದ್ಧವಾಯಿತು. ಕೊನೆಗೆ ಪೂರ್ವ ಪಾಕಿಸ್ತಾನದವರ ನ್ಯಾಯಯುತವಾದ ಹೋರಾಟಕ್ಕೆ ಜಯವಾಗಿ ಸರ್ವತಂತ್ರ ಸ್ವತಂತ್ರ ಬಂಗ್ಲಾದೇಶ ಉದಿತವಾಗಿದೆ.

# ೭

# ಭಾರತ ಬಂಗ್ಲಾ ಬಾಂಧವ್ಯ

ಇಂದು ಬಂಗ್ಲಾದೇಶ ಸರ್ವತಂತ್ರ ಸ್ವತಂತ್ರ ಗಣರಾಜ್ಯವಾಗಿ ಪ್ರಪಂಚದ ಇತರ ರಾಷ್ಟ್ರಗಳ ಸಮೂಹದಲ್ಲಿ ರಾರಾಜಿಸುತ್ತಿದೆ. ವ್ಯಕ್ತಿಸ್ವಾತಂತ್ರ್ಯ, ರಾಷ್ಟ್ರಸ್ವಾತಂತ್ರ್ಯ ಮುಂತಾದ ಉದಾತ್ತ ತತ್ವಗಳನ್ನು ಗೌರವಿಸುವವರೆಲ್ಲ ಈ ಘಟನೆಯಿಂದ ಹೆಮ್ಮೆಪಡಬಹುದಾಗಿದೆ. ಅನ್ಯಾಯ, ಅನೀತಿ, ಅಧರ್ಮಗಳಿಂದ ಕೂಡಿದ ಮಿಲಿಟರಿ ಆಡಳಿತ ಎಷ್ಟೇ ಬಲಶಾಲಿಯಾಗಿರಲಿ ಆತ್ಮಗೌರವವುಳ್ಳ ಪ್ರಜೆಗಳ ಆಶೋತ್ತರಗಳನ್ನು ಹತ್ತಿಕ್ಕುವದು ಸಾಧ್ಯವಿಲ್ಲ ಎಂಬ ನಿತ್ಯ ಸತ್ಯವನ್ನು ಬಂಗ್ಲಾ ದೇಶದ ಪ್ರಜೆಗಳು ಮತ್ತೊಮ್ಮೆ ಎತ್ತಿ ಹಿಡಿದು ಇತಿಹಾಸವನ್ನೇ ನಿರ್ಮಿಸಿದ್ದಾರೆ. ಬಂಗ್ಲಾದೇಶದ ಉದಯ ಮತ್ತು ಅಲ್ಲಿಯ ಜನರ ಯಶಸ್ಸಿನಿಂದ ಭಾರತೀಯರಾದ ನಮಗೂ ಅತ್ಯಂತ ಆನಂದವಾಗಿದೆ. ಭಾರತ-ಬಂಗ್ಲಾ ಬಾಂಧವ್ಯ ಅತ್ಯಂತ ನಿಕಟ ನೆರೆಯವರಾಗಿರುವ ನಮಗೆ ಅಮೂಲ್ಯವಾದ ಸಂಗತಿಯಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ. ಏಕೆಂದರೆ ಅಂದಿನ ಪಾಕಿಸ್ತಾನದ ಎರಡು ಪ್ರದೇಶಗಳ ನಡುವೆ ಇದ್ದ ನಾವು ಇಂದು ಸ್ವತಂತ್ರ ಬಂಗ್ಲಾದೇಶದ ನೆರೆಯ ರಾಷ್ಟ್ರವಾಗಿದ್ದೇವೆ. ಮತ್ತು ಪಾಕಿಸ್ತಾನದ ಉದಯವಾಗುವ ಮುನ್ನ ಪೂರ್ವ ಬಂಗಾಲವು ಭಾರತದ ಒಂದು ಪ್ರಮುಖ ಭಾಗವಾಗಿದ್ದಿತು. ಭಾರತದ ವಿಭಜನೆಯಿಂದಾಗಿ ಈ ಭಾಗವು

ಭೌಗೋಲಿಕವಾಗಿ ಎಷ್ಟೇ ಅಸಂಬದ್ಧವಿದ್ದರೂ ಪಾಕಿಸ್ತಾನದ ಒಂದು ಅಂಗವಾಗಿ ಭಾರತದಿಂದ ಪ್ರತ್ಯೇಕಿಸಲ್ಪಟ್ಟಿತ್ತು. ತದನಂತರ ಜರುಗಿದ ಘಟನೆಗಳನ್ನು ಮತ್ತು ಪಾಕಿಸ್ತಾನದಿಂದ ಸಿಡಿದು ಸ್ವತಂತ್ರ ಬಂಗ್ಲಾದೇಶದ ಉದಯಕ್ಕೆ ಕಾರಣವಾದ ಅನೇಕ ವಿಷಯುಗಳನ್ನು ಇದುವರೆಗೆ ವಿವರಿಸಲಾಗಿದೆ. ಭಾರತ-ಬಂಗ್ಲಾ ಬಾಂಧವ್ಯದ ಅವಶ್ಯಕತೆಯನ್ನು ವಿವರಿಸುವ ಮುನ್ನ ಮೂಲತಃ ಪಾಕಿಸ್ತಾನದ ಆಂತರಿಕ ಸಮಸ್ಯೆಯಾಗಿದ್ದ ಬಂಗ್ಲಾ ಸಮಸ್ಯೆಯಲ್ಲಿ ಭಾರತ ಪ್ರವೇಶ ಮಾಡಿತೆಂದು ಹೇಳಲಾದ ಸನ್ನಿವೇಶಗಳನ್ನು ಗಮನಿಸಬೇಕಾಗಿದೆ.

ಯಾವುದೇ ರಾಷ್ಟ್ರ ತನ್ನ ನೆರೆಹೊರೆಯ ರಾಷ್ಟ್ರಗಳ ಆಂತರಿಕ ವ್ಯವಹಾರಗಳಲ್ಲಿ ಕೈಹಾಕಬಾರದೆಂಬುದು ಎಂದಿನಿಂದಲೂ ಮಾನ್ಯವಾದ ಸತ್ಸಂಪ್ರದಾಯ. ಆದರೆ ತನ್ನ ಅಕ್ಕಪಕ್ಕದಲ್ಲಿ ಏನು ನಡೆಯುತ್ತಿದೆ ಎಂಬುದನ್ನು ಗಮನಿಸುವದು ಯಾವ ರಾಷ್ಟ್ರಕ್ಕಾಗಲಿ ತನ್ನ ಹಿತರಕ್ಷಣೆ ಮತ್ತು ಭದ್ರತೆಯ ದೃಷ್ಟಿಯಿಂದ ಅವಶ್ಯ. ಭಾರತ ಮತ್ತು ಪಾಕಿಸ್ತಾನಗಳ ನಡುವಣ ಸಂಬಂಧಗಳು ಎಂದೂ ಹಿತಕರವಾಗಿಲ್ಲ ಎಂಬುದು ಎಲ್ಲರಿಗೂ ತಿಳಿದ ವಿಷಯ. ಯಾವುದಾದರೂ ಒಂದು ನೆಪಮಾಡಿ—ಅದು ಕಾಶ್ಮೀರ ಸಮಸ್ಯೆಯೇ ಆಗಿರಬೇಕಾಗಿಲ್ಲ—ಪಾಕಿಸ್ತಾನವು ಭಾರತವನ್ನು ತನ್ನ ಶತ್ರುರಾಷ್ಟ್ರವೆಂದು ಪರಿಗಣಿಸುತ್ತ ಬಂದಿದೆ. ಕೆಲವು ಪಾಶ್ಚಿಮಾತ್ಯ ರಾಷ್ಟ್ರಗಳು ಮತ್ತು ಪ್ರಬಲ ರಾಷ್ಟ್ರಗಳು ಇದಕ್ಕೆ ಪ್ರೋತ್ಸಾಹವನ್ನೀಯುತ್ತಾ ಬಂದು ತನಗಿಂತಲೂ ಗಾತ್ರದಲ್ಲಿ ದೊಡ್ಡ ರಾಷ್ಟ್ರವಾದ ಭಾರತದ ಮೇಲೆ ಪಾಕಿಸ್ತಾನವು ಇದುವರೆಗೆ ನಾಲ್ಕು

ಸಾರಿ ಮಿಲಿಟರಿ ಆಕ್ರಮಣ ನಡೆಸಲು ಪ್ರಚೋದನೆಯನ್ನಿತ್ತಿವೆ. ಇಷ್ಟಾಗಿಯೂ ಭಾರತ ಸರಕಾರವು ಪಾಕಿಸ್ತಾನದ ಆಂತರಿಕ ವ್ಯವಹಾರಗಳಲ್ಲಿಯೇ ಏಕೆ, ಆ ದೇಶದ ಯಾವದೇ ವ್ಯವಹಾರಗಳಲ್ಲಿ ಕೈಹಾಕದೇ ತನ್ನ ಹಿತರಕ್ಷಣೆಯನ್ನು ಮಾತ್ರ ನೋಡಿಕೊಳ್ಳುವ ನೀತಿಯನ್ನನುಸರಿಸುತ್ತಾ ಬಂದಿದೆ. ಪಾಕಿಸ್ತಾನವು ತನ್ನ ಪೂರ್ವ ಪ್ರದೇಶದ ಮೇಲೆ ಮಿಲಿಟರಿ ಆಡಳಿತ, ಬಲಪ್ರಯೋಗ ಮುಂತಾದವುಗಳ ಮೂಲಕ ಅರಾಜಕತೆಯನ್ನುಂಟುಮಾಡಿದಾಗಿನಿಂದಲೂ ಅಲ್ಲಿಂದ ಭಾರತ ಗಡಿ ದಾಟಿ ಪ್ರತಿನಿತ್ಯ ಸುಮಾರು ೫೦ ರಿಂದ ೬೦ ಸಾವಿರ ನಿರಾಶ್ರಿತರು ಈ ದೇಶಕ್ಕೆ ಬರತೊಡಗಿದರು. ಈ ನಿರಾಶ್ರಿತರ ಪ್ರವಾಹವು ಒಂಭತ್ತು ತಿಂಗಳ ಅವಧಿಯಲ್ಲಿ ಒಟ್ಟು ಒಂದು ಕೋಟಿಯಷ್ಟು ಪೂರ್ವ ಪಾಕಿಸ್ತಾನಿಯರನ್ನು ಭಾರತದೊಳಕ್ಕೆ ತಂದಿತು. ಪಶ್ಚಿಮ ಬಂಗಾಳ, ಆಸಾಂ, ಮಣಿಪುರ, ತ್ರಿಪುರಾ ರಾಜ್ಯಗಳು ಈ ನಿರಾಶ್ರಿತರಿಗೆ ಆಶ್ರಯವನ್ನೊದಗಿಸುವ ಹೊಣೆಯನ್ನು ಹೊತ್ತವು. ಇಂತಹ ಬೃಹತ್ ಪ್ರಮಾಣದಲ್ಲಿ ಒಂದು ದೇಶದಿಂದ ಇನ್ನೊಂದು ದೇಶಕ್ಕೆ ವಲಸೆ ಹೋದ ನಿರಾಶ್ರಿತರ ಪ್ರವಾಹ ಇತಿಹಾಸದಲ್ಲಿಯೇ ಪ್ರಥಮಬಾರಿ ಎಂದು ಹೇಳಬಹುದು. ಹಿಟ್ಲರನ ದಮನ ನೀತಿಯಿಂದ ಸಂತ್ರಸ್ತರಾದ ಜನರೂ ಕೂಡ ಇಷ್ಟು ದೊಡ್ಡ ಸಂಖ್ಯೆಯಲ್ಲಿ ವಲಸೆ ಹೋಗಿರಲಿಲ್ಲ. ಪೂರ್ವ ಪಾಕಿಸ್ತಾನದಿಂದ ಅನೇಕಬಾರಿ ನಿರಾಶ್ರಿತರಾಗಿ ಜನ ತಮ್ಮ ಮನೆ-ಮಠಗಳನ್ನು ಬಿಟ್ಟು ಭಾರತಕ್ಕೆ ಬಂದದ್ದುಂಟು. ಪೂರ್ವ ಪಾಕಿಸ್ತಾನದ ಜನರು ಯಾವಾಗಲೂ 'ಗುಳೇದ' ಜನರೆನಿಸಿಕೊಂಡಿರುವದು ದುರ್ದೈವದ ಸಂಗತಿ. ಈ ಕೆಳಗಿನ ಅಂಕಿಗಳಿಂದ ಈ ನಾಡು ಎಷ್ಟು ದುರ್ದೈವಿ ಎಂಬುದು ತಿಳಿಯುತ್ತದೆ.

## ಪೂರ್ವ ಪಾಕಿಸ್ತಾನದಿಂದ ಭಾರತಕ್ಕೆ ನಿರಾಶ್ರಿತರ ಆಗಮನ

| ವರ್ಷ | ನಿರಾಶ್ರಿತರ ಸಂಖ್ಯೆ | ಕಾರಣಗಳು |
|---|---|---|
| ೧೯೪೬ | ೧೯,೦೦೦ | ಹಿಂದೂಗಳ ವಿರುದ್ಧ ಹಿಂಸಾಕೃತ್ಯ |
| ೧೯೪೭ | ೩೪೪,೦೦೦ | ಭಾರತದ ವಿಭಜನೆ |
| ೧೯೪೮ | ೭೮೬,೦೦೦ | ಹೈದರಾಬಾದಿನಲ್ಲಿ ಆದ ಪೋಲಿಸ್ ಕಾರ್ಯಾಚರಣೆಗೆ ಪ್ರತಿಕ್ರಿಯೆ |
| ೧೯೪೯ | ೨೧೩,೦೦೦ | ಭಾಷಾ ಚಳುವಳಿ |
| ೧೯೫೦ | ೧,೫೭೫,೦೦೦ | ಹಿಂದೂಗಳ ವಿರುದ್ಧ ಹಿಂಸಾಕೃತ್ಯಗಳು |
| ೧೯೫೧ | ೧೮೭,೦೦೦ | ಕಾಶ್ಮೀರ ಚಳುವಳಿ |
| ೧೯೫೨ | ೨೦೩.೦೦೦ | ಆರ್ಥಿಕ ನಿರಾಶೆ ಮತ್ತು ಪಾಸ್‌ಪೋರ್ಟ್ ಸಂಬಂಧ ಚಳುವಳಿ |
| ೧೯೫೩ | ೭೬.೦೦೦ | ಭಾಷಾ ಚಳುವಳಿ |
| ೧೯೫೪ | ೧೧೮.೦೦೦ | ಭಾಷಾ ಚಳುವಳಿ |
| ೧೯೫೫ | ೨೩೯.೦೦೦ | ಭಾಷಾ ಪ್ರಶ್ನೆಯಿಂದ ಉಂಟಾದ ಅರಾಜಕತೆ |

| ವರ್ಷ | ನಿರಾಶ್ರಿತರ ಸಂಖ್ಯೆ | ಕಾರಣಗಳು |
|---|---|---|
| ೧೯೫೬ | ೩,೨೦,೦೦೦ | ಪಾಕಿಸ್ತಾನವು ಇಸ್ಲಾಂ ಸಂವಿಧಾನ ವನ್ನು ಅಂಗೀಕರಿಸಿದ್ದರಿಂದ |
| ೧೯೬೪ | ೮೫೬,೦೦೦ | ಶ್ರೀನಗರದ ಒಂದು ಮಸೀದೆಯಿಂದ ಪೈಗಂಬರರ ಕೂದಲು ಕಳುವಾದದ್ದು (ಹಜರತ್‌ಬಾಲ್ ಘಟನೆ) |
| ೧೯೬೫ | ೭೦,೦೦೦ | ಒಂದೂ ವಿರೋಧಿ ಚಳುವಳಿ ಮತ್ತು ಹಿಂಸಾಕೃತ್ಯಗಳು |
| ೧೯೭೧ | ೧೦೦,೦೦,೦೦೦ | ಪೂರ್ವ ಪಾಕಿಸ್ತಾನದಲ್ಲಿ ಪ್ರಜಾಸತ್ತೆ ಮತ್ತು ಸ್ವಾಯತ್ತತೆಯ ಚಳುವಳಿಯ ದಮನದಿಂದ |

( ಆಧಾರ : **Illustrated Weekly of India** )

ನಿರಾಶ್ರಿತರ ಬಗೆಗಿನ ಈ ಅಂಕಿ ಅಂಶಗಳಿಂದ ಪೂರ್ವ ಪಾಕಿಸ್ತಾನದಿಂದ ಕಳೆದ ಇಪ್ಪತ್ತೈದು ವರ್ಷಗಳ ಅವಧಿಯಲ್ಲಿ ಒಟ್ಟು ಹದಿನಾಲ್ಕು ಬಾರಿ ಅಲ್ಲಿಯ ಜನರು ದೇಶಬಿಟ್ಟು ಹೊರಗೆ ಹೋಗಬೇಕಾಯಿತು. ಅದೂ ಭಾರತಕ್ಕೆ ಮತ್ತು ಯಾವಾಗಲೂ ಹಿಂದುಗಳೇ ಈ ನಿರಾಶ್ರಿತರ ಪ್ರವಾಹದಲ್ಲಿರುತ್ತಿದ್ದರು. ಆದರೆ ಈ

ಸಾರಿ ಬಂದ ಒಂದು ಕೋಟಿ ನಿರಾಶ್ರಿತರಲ್ಲಿ ಹೆಚ್ಚಾಗಿ ಹಿಂದು ಗಳೇ ಇದ್ದರೂ ಮುಸ್ಲೀಮರು, ಕ್ರಿಶ್ಚಿಯನ್ನರು, ಬೌದ್ಧರು, ಮುದುಕರು, ಯುವಕರು, ಹಿರಿಯರು ಎಲ್ಲರೂ ಸೇರಿದ್ದರು. ಈ ಎಲ್ಲರ ಪಾಲಣೆ ಪೋಷಣೆಯ ಹೊಣೆಯನ್ನು ನಮ್ಮ ಗಡಿ ರಾಜ್ಯಗಳೇ ಅಲ್ಲದೆ ಇಡೀ ರಾಷ್ಟ್ರವು ಈ ಅನಿರೀಕ್ಷಿತ ಆರ್ಥಿಕ ಹೊರೆಯನ್ನು ಹೊರಬೇಕಾಯಿತು. ಈ ನಿರಾಶ್ರಿತರ ನಿರ್ವಹಣೆ ಗಾಗಿ ಪ್ರತಿದಿನ ಅಂದಾಜು ಮೂರು ಕೋಟಿ ರೂಪಾಯಿಗಳು ಖರ್ಚಾಗುತ್ತಿದ್ದವು. ಈ ನಿರಾಶ್ರಿತರಿಗೆ ಸುಮಾರು ೯೦೦ ವಿಶೇಷ ಶಿಬಿರಗಳಲ್ಲಿ ಆಶ್ರಯವನ್ನು ಕೊಡಲಾಯಿತಲ್ಲದೆ ಸುಮಾರು ೩೦,೦೦೦ ಸರಕಾರಿ ನೌಕರರು ಕಾರ್ಯನಿರತರಾಗಿದ್ದರು. ಇದೂ ಅಲ್ಲದೆ ಅನೇಕ ಖಾಸಗಿ ಸಂಘ ಸಂಸ್ಥೆಗಳು ನಿರಾಶ್ರಿತರ ಪೋಷ ಣೆಯ ಕಾರ್ಯದಲ್ಲಿ ಭಾಗಿಗಳಾಗಿದ್ದವು. ಇವರ ನಿರ್ವಹಣೆಗಾಗಿ ನಮ್ಮ ಸರಕಾರಕ್ಕೆ ಸುಮಾರು ೫೦೦ ಕೋಟಿ ರೂಪಾಯಿಗಳ ವೆಚ್ಚವಾಯಿತು. ಈಗ ನಿರಾಶ್ರಿತರು ಸ್ವತಂತ್ರ ಬಂಗ್ಲಾದೇಶಕ್ಕೆ ವಾಪಸಾಗುತ್ತಿದ್ದು ಅವರು ಅಲ್ಲಿಗೆ ಹೋಗುವವರೆಗೆ ಬೇಕಾಗುವ ಅವಶ್ಯ ವಸ್ತುಗಳನ್ನು ಅವರಿಗೆ ಕೊಟ್ಟು ಕಳುಹಿಸಲಾಗುತ್ತಿದೆ.

ಇಷ್ಟೆಲ್ಲಾ ಭಾರವನ್ನು ನಮ್ಮ ಮೇಲೆ ಹೇರಲು ಪಾಕಿಸ್ತಾನದ ದಮನ ನೀತಿಯೇ ಕಾರಣ. ಮತ್ತು ಇದು ಪಾಕಿಸ್ತಾನದ ಕುತಂತ್ರವೂ ಆಗಿತ್ತು. ನಮ್ಮ ಆರ್ಥಿಕ ಶಕ್ತಿ, ಪ್ರಗತಿ, ಭದ್ರತೆ ಮುಂತಾದವುಗಳನ್ನು ಅಸ್ತವ್ಯಸ್ತಗೊಳಿಸುವದರ ಮೂಲಕ ಭಾರತವನ್ನು ಅಬಲ ರಾಷ್ಟ್ರವನ್ನಾಗಿ ಮಾರ್ಪಡಿಸುವದೂ ಪಾಕಿ ಸ್ತಾನದ ಒಂದು ಉದ್ದೇಶವಾಗಿದ್ದಿತು. ಇಷ್ಟಾದರೂ ನಾವು

ಪದೇ ಪದೇ ಪಾಕಿಸ್ತಾನ ಮಾತ್ರವಲ್ಲದೆ ಪ್ರಪಂಚದ ಎಲ್ಲಾ ರಾಷ್ಟ್ರಗಳ ಧುರೀಣರುಗಳಿಗೆ ಈ ಸಮಸ್ಯೆಯನ್ನು ಬಗೆಹರಿಸುವ ಶಾಂತಿಯುತ ಮಾರ್ಗವನ್ನನುಸರಿಸಲು ಪ್ರಯತ್ನಿಸಬೇಕೆಂದು ಕೇಳಿಕೊಂಡೆವು. ಪಾಕಿಸ್ತಾನವು ನಮ್ಮ ಗಡಿಗುಂಟ ಸೈನ್ಯ ಜಮಾವಣೆ ಮಾಡುತ್ತಾ ಅನೇಕ ಸಾರಿ ಗಡಿ ಉಲ್ಲಂಘನೆ ಮಾಡಿತು. ನಮ್ಮ ಮಂತ್ರಿಗಳು ಪ್ರಪಂಚದ ವಿವಿಧ ರಾಜಧಾನಿಗಳಿಗೆ ಹೋಗಿ ಸಮಸ್ಯೆಯ ಗಂಭೀರತೆಯನ್ನು ವಿವರಿಸಿದರು. ಸ್ವತಃ ಪ್ರಧಾನಿ ಇಂದಿರಾ ಗಾಂಧಿಯವರು ೧೯೭೧ ರ ನವ್ಹಂಬರ ತಿಂಗಳಲ್ಲಿ ಅಮೇರಿಕ, ಬ್ರಿಟನ್, ಫ್ರಾನ್ಸಗಳನ್ನೊಳಗೊಂಡ ಆರು ಐರೋಪ್ಯ ರಾಷ್ಟ್ರಗಳಿಗೆ ಭೆಟ್ಟಿ ಇತ್ತು ಪೂರ್ವ ಪಾಕಿಸ್ತಾನದ ಸಮಸ್ಯೆಗೆ ರಾಜಕೀಯ ಪರಿಹಾರ ಕಂಡುಹಿಡಿಯುವ ಆವಶ್ಯಕತೆಯನ್ನು ಸತ್ವಯುತವಾಗಿ ಪ್ರತಿಪಾದಿಸಿದರು. ಆದರೂ ಅಮೇರಿಕಾ ಸರಕಾರವು ಇದು ಪಾಕಿಸ್ತಾನದ ಆಂತರಿಕ ಸಮಸ್ಯೆ ಎಂಬ ಭ್ರಮೆಯನ್ನು ಬಿಡಲಿಲ್ಲ. ಯಾವದು ಪಾಕಿಸ್ತಾನದ ಆಂತರಿಕ ಸಮಸ್ಯೆಯಾಗಿದ್ದಿತೋ ಅದು ಈ ನಿರಾಶ್ರಿತರ ಪ್ರವಾಹದಿಂದ ಭಾರತದ ಆಂತರಿಕ ಸಮಸ್ಯೆಯಾಗಿ ಪರಿಣಮಿಸಿತು. ಆದ್ದರಿಂದ ತನ್ನ ಆಂತರಿಕ ಆಡಳಿತದ ಹೆಸರಿನಲ್ಲಿ ಭಾರತದ ಜನತೆ ಮತ್ತು ಭದ್ರತೆಗೆ ಗಂಡಾಂತರ ಒಡ್ಡುವ ಪ್ರಯತ್ನವನ್ನು ಎದುರಿಸುವ ಹಕ್ಕನ್ನು ಭಾರತ ಚಲಾಯಿಸಲೇಬೇಕಾಗುವ ಪ್ರಸಂಗ ಉಂಟಾಯಿತು. ಒಂದು ಕೋಟಿ ವಿದೇಶಿಯರನ್ನು ತನ್ನ ಮಡಿಲಿನಲ್ಲಿ ಹಾಕಿಕೊಳ್ಳುವ ಸಾಹಸವನ್ನು ಯಾವ ರಾಷ್ಟ್ರವೂ ಮಾಡಲಾರದು. ಭಾರತವು ಹೇಗಾದರೂ ಮಾಡಿ ಇವರ ವಾಪಸಾತಿಗೆ

ಹೊಣಗಬೇಕಾಯಿತು. ನಾವು ಶಾಂತಿಪ್ರಿಯರು, ಸಹನಶೀಲರು ಯುದ್ಧವು ಭಾರತದ ವಿದೇಶಾಂಗ ನೀತಿಗೆ ಸಮ್ಮತವಲ್ಲ. ಆದ್ದರಿಂದ ಯುದ್ಧದ ಬೆದರಿಕೆ ತೋರಿಸಿ ನಿರಾಶ್ರಿತರನ್ನು ಪುನಃ ತಳ್ಳಿಣಗೊಳಿಸುವ ಇಚ್ಛೆ ಭಾರತಕ್ಕಿರಲಿಲ್ಲ. ಆದ್ದರಿಂದಲೇ ಶೇಖ ಮುಜೀಬುರರನ್ನು ಬಿಡುಗಡೆ ಮಾಡಿ ರಾಜಕೀಯ ಪರಿಹಾರದ ದಿಶೆಯಲ್ಲಿ ಪ್ರಯತ್ನ ಮಾಡಬೇಕೆಂದು ನಾವು ಹೇಳುತ್ತಾ ಬಂದೆವು.

ಈ ದಿಶೆಯಲ್ಲಿ ಪ್ರಯತ್ನಗಳು ಸಾಗಿದ್ದಂತೆಯೇ ಡಿಶಂಬರ ೩, ೧೯೭೧ ರ ಸಂಜೆ ಪಾಕಿಸ್ತಾನವು ಭಾರತದ ವಿಮಾನ ನೆಲೆಗಳ ಮೇಲೆ ಇದ್ದಕ್ಕಿದ್ದಂತೆ ಬಾಂಬ ದಾಳಿ ಮಾಡಿ ಯುದ್ಧ ಸಾರಿತು. ಭಾರತವು ತನ್ನ ರಕ್ಷಣಾರ್ಥವಾಗಿ ಅವಶ್ಯವಾದ ಕಾರ್ಯಾಚರಣೆಯನ್ನು ಮಾಡಲೇಬೇಕಾಯಿತು. ಭಾರತದ ಮೇಲಿನ ಈ ಆಕ್ರಮಣ ಯಾವ ತಪ್ಪಿಗಾಗಿ ? ಪಾಕಿಸ್ತಾನದ ಒಂದು ಕೋಟಿ ಜನತೆಯನ್ನು ಸಂರಕ್ಷಿಸಿದ್ದಕ್ಕಾಗಿಯೇ ? ಯಾವ ಕಾರ್ಯವನ್ನು ಅಂತರರಾಷ್ಟ್ರೀಯ ಮಟ್ಟದಲ್ಲಿ ಸಂಯುಕ್ತರಾಷ್ಟ್ರ ಸಂಘವು ನಿರ್ವಹಿಸಬೇಕಾಗಿತ್ತೋ ಅಂತಹ ಕಾರ್ಯವನ್ನು ಭಾರತವು ನಿರ್ವಹಿಸಿದ್ದಕ್ಕಾಗಿಯೇ ? ಇಷ್ಟಾದರೂ ಪ್ರಜಾಪ್ರಭುತ್ವವಾದಿಗಳೆಂದು ಕರೆದುಕೊಳ್ಳುತ್ತಿರುವ ಅಮೇರಿಕ ಭಾರತವನ್ನೇ ಆಕ್ರಮಣಕಾರಿ ಎಂದಿತು ! ಇದೆಂತಹ ವಿಪರ್ಯಾಸ ? ಎಂತಹ ಭ್ರಮೆ ? ಇಷ್ಟೇ ಅಲ್ಲ ಅದು ಭಾರತಕ್ಕೆ ಕೊಡುತ್ತಿದ್ದ ಆರ್ಥಿಕ ಸಹಾಯವನ್ನೂ ನಿಲ್ಲಿಸಿತು. ಅಮೇರಿಕೆಯು ಪಾಕಿಸ್ತಾನದ ನೆರವಿಗಾಗಿ ಯುದ್ಧ ನಡೆದಾಗ ತನ್ನ ಸಪ್ತಮ ನೌಕಾದಳದ ಅಣುಚಾಲಿತ

"ಎಂಟರ್ ಪ್ರೈಜ್" ನೌಕೆಯನ್ನು ಬಂಗಾಳ ಕೊಲ್ಲಿಗೆ ಕಳುಹಿಸಿತು. ಇದರಿಂದ ಭಾರತೀಯ ನೌಕಾದಳ ಮತ್ತು ವಾಯುದಳದ ಗಮನ ವನ್ನು ಪೂರ್ವ ಪಾಕಿಸ್ತಾನದಿಂದ ಹೊರಳಿಸುವದು ಸಾಧ್ಯವಾಗು ವದೆಂದು ಅವರು ನಂಬಿದ್ದರು. ಆದರೆ ಭಾರತೀಯ ನೌಕಾದ ಳದವರು ಧೃತಿಗೆಡದೆ ಪೂರ್ವ ಪಾಕಿಸ್ತಾನದ ವಿಮೋಚನೆಯ ಕಾರ್ಯದಿಂದ ವಿಚಲಿತರಾಗಲಿಲ್ಲ. 'ಎಂಟರ್ ಪ್ರೈಜ್' ಕಾರ್ಯಾ ಚರಣೆಗೆ ತೊಡಗುವ ಮುನ್ನವೇ ಎಂದರೆ ಡಿಶಂಬರ ೧೬ ರಂದು ಜನರಲ್ ನಿಯಾಜಿಯವರು ಭಾರತದ ಪಡೆಗೆ ಶರಣಾಗತರಾದ್ದ ರಿಂದ ಈ ಯುದ್ಧ ಕೊನೆಗೊಂಡಿತು. 'ಎಂಟರ್ ಪ್ರೈಜ್' ಬಂದ ದಾರಿಗೆ ಸುಂಕವಿಲ್ಲದೆ ವಾಪಸಾಗಬೇಕಾಯಿತು. ಇದು ಅಮೇ ರಿಕ ಅಧ್ಯಕ್ಷ ನಿಕ್ಸನ್ನರ ಮತ್ತು ಅವರ ಸಲಹೆಗಾರರಾದ ಡಾ. ಹೆನ್ರಿ ಕಿಸಿಂಜರರ ಭ್ರಮಿಕ ನೀತಿಯ ಫಲ. ಅಂತೂ, ಪಾಕಿಸ್ತಾನದವರೇ ಸಾರಿದ ಯುದ್ಧ ಕೇವಲ ಹದಿನಾಲ್ಕು ದಿನಗಳಲ್ಲಿ ಮುಗಿದು ಅದರ ಫಲಶ್ರುತಿಯಾಗಿ ಪಾಕಿಸ್ತಾನವು ಇಭ್ಭಾಗವಾಗಿ ಬಂಗ್ಲಾ ದೇಶದ ಉದಯವಾಯಿತು. ಅಳಿದುಳಿದ ಪಶ್ಚಿಮ ಪ್ರದೇಶಗಳ 'ಪಾಕಿಸ್ತಾನ' ವಾಗಿ ಅದು ವಿಸ್ತೀರ್ಣ, ಜನಸಂಖ್ಯೆ, ಸಂಪನ್ಮೂಲ ಗಳ ದೃಷ್ಟಿಯಿಂದ ಇಂದು ಅಬಲ ರಾಷ್ಟ್ರವಾಗಿ ಉಳಿದಿದೆ. ಭಾರತದ ದೃಷ್ಟಿಯಲ್ಲಿ ಇದಕ್ಕಿಂತಲೂ ಹೆಚ್ಚಾಗಿ ನಿರಾಶ್ರಿತರ ಸಮಸ್ಯೆ ಬಗೆ ಹರಿಯಲು ಈ ಯುದ್ಧ ಸಹಾಯವಾಯಿತು. ಇದಕ್ಕೆ ನಾವು ತೆತ್ತ ಬೆಲೆ ಅಪಾರ ಮತ್ತು ಅನಿವಾರ್ಯವೇ ಆಯಿತು. ಒಂದು ಅಂದಾಜಿನ ಪ್ರಕಾರ ನಾವು ಈ ಯುದ್ಧಕ್ಕಾಗಿ ಒಂದು ಕೋಟಿ ರೂಪಾಯಿಗಳನ್ನು ಖರ್ಚು ಮಾಡಬೇಕಾಯಿತು.

ಮತ್ತು ಸುಮಾರು ಎರಡು ಸಾವಿರಕ್ಕಿಂತಲೂ ಹೆಚ್ಚು ಶೂರ ಶಿಪಾಯಿಗಳನ್ನು ೪೫, ವಿಮಾನಗಳನ್ನೂ ೭೩ ಟ್ಯಾಂಕಗಳನ್ನೂ, ಮತ್ತು ಒಂದು ಹಡಗವನ್ನು ಕಳೆದುಕೊಳ್ಳಬೇಕಾಯಿತು. ಆದರೆ ಪಾಕಿಸ್ತಾನವು ಇದಕ್ಕಿಂತಲೂ ಹೆಚ್ಚು ಬೆಲೆಯನ್ನು ತೆರಬೇಕಾಯಿತು. ನಮಗಿಂತಲೂ ಮೂರರಷ್ಟು ಹೆಚ್ಚು ಖರ್ಚನ್ನು ಅವರು ಮಾಡಿದರು. ಅವರ ೯೪ ವಿಮಾನಗಳು, ೨೪೪ ಟ್ಯಾಂಕುಗಳು, ೨೮ ಹಡಗುಗಳು, ಹಾಗೂ ದೋಣಿಗಳು ೨ ಸಬ್ ಮರಿನ್ ನಾಶವಾದವು. ಅವರಕಡೆ ಇನ್ನೂ ಹೆಚ್ಚಿನ ಸಾವು ನೋವುಗಳಾದುವಲ್ಲದೇ ಸುಮಾರು ೯೦,೦೦೦ ಪಾಕಿಸ್ತಾನಿ ಸೈನಿಕರು ಭಾರತದಲ್ಲಿ ಯುದ್ಧ ಕೈದಿಗಳಾಗಿದ್ದಾರೆ. ಇದರಿಂದ ಸಧ್ಯಕ್ಕೆ ಪಾಕಿಸ್ತಾನದ ಮಿಲಿಟರಿ ಬಲ ಸಂಪೂರ್ಣ ದುರ್ಬಲವಾದಂತಾಗಿದೆ.

ಇನ್ನು ಭಾರತವು ಸ್ವತಂತ್ರ ಬಂಗ್ಲಾದೇಶದೊಡನೆ ಯಾವ ರೀತಿ ಸ್ನೇಹ ಸಂಬಂಧಗಳನ್ನು ಬೆಳೆಸಿಕೊಂಡು ಹೋಗಬಹುದೆಂಬುದನ್ನು ವಿಚಾರಿಸೋಣ. ಈಗಾಗಲೇ ತಿಳಿಸಿದಂತೆ ಈ ಎರಡೂ ರಾಷ್ಟ್ರಗಳ ಸಂಬಂಧಗಳು ಹಿತಕರವಾಗಿರುವದು ಅತ್ಯವಶ್ಯಕ. ಮೊದಲನೆಯದಾಗಿ, ಈ ಎರಡು ರಾಷ್ಟ್ರಗಳ ಭೌಗೋಲಿಕ ಸಂಲಗ್ನತೆಯನ್ನೇ ತೆಗೆದುಕೊಳ್ಳೋಣ. ಇಬ್ಬರ ನಡುವಣ ಗಡಿಯ ವಿವರ ಈ ರೀತಿ ಇದೆ:

( ಅಂಕಿಗಳು ಕಿಲೋ ಮೀಟರುಗಳಲ್ಲಿ )

| ಪ್ರದೇಶ | ನದಿ ಗಡಿ | ಗುಡ್ಡಗಾಡು ಗಡಿ ಪ್ರದೇಶ | ಮೈದಾನ ಪ್ರದೇಶದ ಗಡಿ | ಒಟ್ಟು ಗಡಿ ಪ್ರದೇಶ |
|---|---|---|---|---|
| ೧) ಬಂಗ್ಲಾದೇಶ ಮತ್ತು ಪಶ್ಚಿಮ ಬಂಗಾಲಗಳ ನಡುವೆ | ೨.೫೭೨ | — | ೧.೫೮೨ | ೧.೯೭೪ |
| ೨) ಬಂಗ್ಲಾದೇಶ ಮತ್ತು ಆಸಾಂಗಳ ನಡುವೆ | ೨.೦೩ | ೫೯೯ | ೫೯೦ | ೧.೭೯೨ |
| ೩) ಬಂಗ್ಲಾದೇಶ ಮತ್ತು ಬರ್ಮಾಗಳ ನಡುವೆ | ೭೪ | ೧೯೬ | ೧೦ | ೨೦೦ |

( ಅಂಕಿಗಳು ಕಿಲೋ ಮೀಟರುಗಳಲ್ಲಿ )

| ಪ್ರದೇಶ | ನದಿ ಗಡಿ | ಗುಡ್ಡಗಾಡು ಗಡಿ ಪ್ರದೇಶ | ಮೈದಾನ ಪ್ರದೇಶದ ಗಡಿ | ಒಟ್ಟು ಗಡಿ ಪ್ರದೇಶ |
|---|---|---|---|---|
| ೪ ಸಮುದ್ರದ ಗಡಿ | — | — | — | ೭೧೬ |
| ಒಟ್ಟು | ೭೨೯ | ೭೯೫ | ೨೪೭೨ | ೪೭೧೨ |

( ಆಧಾರ–**Indian Express, 18 12-1971** )

ಹೀಗೆ ಬಂಗ್ಲಾದೇಶದ ಒಟ್ಟು ೪,೭೧೨ ಕಿಲೋಮೀಟರ ಗಡಿ ಪ್ರದೇಶದಲ್ಲಿ ೩,೭೧೬ ಕಿಲೋಮೀಟರ ಪ್ರದೇಶವು ಭಾರತಕ್ಕೆ ಹೊಂದಿಕೊಂಡಿದೆ. ಹೀಗಿರುವಾಗ ಬಂಗ್ಲಾದೇಶ ಮತ್ತು ಭಾರತದ ಸಂಬಂಧಗಳು ಪರಸ್ಪರ ಪೂರಕವಾಗಿರುವದು ಸಹಜವೇ. ಐತಿಹಾಸಿಕವಾಗಿಯೂ ಎರಡೂ ದೇಶಗಳು ಮೊದಲು ಒಂದೇ ದೇಶದ ಭಾಗಗಳಾಗಿದ್ದವು. ಮತ್ತು ರಾಜಕೀಯವಾಗಿಯೂ ಕೂಡ ಭಾರತದ ತತ್ವಗಳು ಮತ್ತು ಬಂಗ್ಲಾದೇಶದ ಮಾನ್ಯವಾದಿ ರುವ ತತ್ವಗಳೂ ಒಂದೇ ಆಗಿವೆ. ಪ್ರಧಾನಿ ಶೇಖ ಮುಜಿಬುರರು ಘೋಷಿಸಿರುವಂತೆ ಬಂಗ್ಲಾದೇಶವು ಜಾತ್ಯಾತೀತ, ಪ್ರಜಾಸತ್ತಾತ್ಮಕ, ಸಮಾಜವಾದಿ ಸರ್ವತಂತ್ರ ಸ್ವತಂತ್ರ ಗಣರಾಜ್ಯ ತತ್ವಗಳಿಗನುಗುಣವಾಗಿ ತನ್ನ ನೀತಿಯನ್ನು ರೂಪಿಸಿಕೊಳ್ಳುತ್ತಿದೆ. ವಿದೇಶಾಂಗ ನೀತಿಯಲ್ಲಿಯೂ ಭಾರತದ ಆದರ್ಶವಾಗಿರುವ ಅಲಿಪ್ತ ನೀತಿಯನ್ನೇ ಅನುಸರಿಸುವದಾಗಿ ಘೋಷಿಸಲಾಗಿದೆ. ಆರ್ಥಿಕಾಭಿವೃದ್ಧಿಗಾಗಿ ಅತ್ಯವಶ್ಯಕವಾಗಿರುವ ವಿದೇಶಿ ನೆರವನ್ನು ಯಾವ ರಾಜಕೀಯ ಒತ್ತಡಕ್ಕೂ ಒಳಗಾಗದಂತಹ ರೀತಿಯಲ್ಲಿ ಮಾತ್ರ ಸ್ವೀಕರಿಸುವದಾಗಿ ತಿಳಿಸಲಾಗಿದೆ. ಹೀಗೆ ಎಲ್ಲ ದೃಷ್ಟಿಯಿಂದಲೂ ಭಾರತದ ಪ್ರಭಾವವು ಬಂಗ್ಲಾದೇಶದ ನೀತಿಯಲ್ಲಿ ಬಿಂಬಿತವಾಗಿದೆ. ಅಂತೆಯೇ ಯುದ್ಧ ಪ್ರಾರಂಭವಾದ ಕೂಡಲೇ ಭಾರತವು ಬಂಗ್ಲಾದೇಶಕ್ಕೆ ಡಿಸೆಂಬರ ೬ ರಂದು ಮನ್ನಣೆಯನ್ನಿತ್ತ ಪ್ರಥಮ ರಾಷ್ಟ್ರವಾಗಿದೆ. ಆದ್ದರಿಂದ ಬಂಗ್ಲಾದೇಶದ ಸರ್ವತೋಮುಖವಾದ ಅಭಿವೃದ್ಧಿಗಾಗಿ ಭಾರತವು ತನ್ನ ಶಕ್ತಿ ಮೀರಿ ಸಹಾಯ ಸಹಕಾರವನ್ನೊದಗಿಸುವ

ನೈತಿಕ ಹೊಣೆಯನ್ನು ಹೊರಬೇಕಾಗಿದೆ. ಬಂಗ್ಲಾದೇಶವು ಎದುರಿಸುತ್ತಿರುವ ಅನೇಕ ಜಟಿಲ ಸಮಸ್ಯೆಗಳಲ್ಲಿ ವಾಪಸಾದ ನಿರಾಶ್ರಿತರ ಮರುವಸತಿ, ಬಂಗ್ಲಾದೇಶದ ಜನತೆಯಲ್ಲಿ ಹೊಸ ಚೈತನ್ಯವನ್ನು ಹುಟ್ಟಿಸಿ ಅವರು ಮತ್ತೊಮ್ಮೆ ಜೀವಂತ ಜನರಾಗಲು ಅವಶ್ಯವಾಗಿರುವ ಆತ್ಮವಿಶ್ವಾಸ ಮುಂತಾದವುಗಳಿಗೆ ಆದ್ಯ ಗಮನ ಕೊಡಬೇಕಾಗಿದೆ. ಬಂಗ್ಲಾದೇಶದ ಪುನರಚನೆ, ಆರ್ಥಿಕ ಅಭಿವೃದ್ಧಿಯ ಸಾಧ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ಭಾರತ ಹಾಗೂ ಪ್ರಪಂಚದ ಇತರ ರಾಷ್ಟ್ರಗಳು ತಮ್ಮ ಸಹಕಾರ ಹಸ್ತವನ್ನು ನೀಡಬೇಕಾಗಿದೆ. ಈಗಾಗಲೇ ಐವತ್ತು ರಾಷ್ಟ್ರಗಳಿಂಗಿತಲೂ ಹೆಚ್ಚು ರಾಷ್ಟ್ರಗಳು ಬಂಗ್ಲಾ ದೇಶಕ್ಕೆ ಮನ್ನಣೆ ನೀಡಿರುವದು ಸ್ವಾಗತಾರ್ಹ. ಇವುಗಳಲ್ಲಿ ರಷ್ಯ, ಬ್ರಿಟನ್, ಫ್ರಾನ್ಸ ಮುಂತಾದ ಪ್ರಭಾವಶಾಲಿ ರಾಷ್ಟ್ರಗಳು ಮತ್ತು ಕೆಲವು ಮುಸ್ಲಿಂ ರಾಷ್ಟ್ರಗಳೂ ಸೇರಿರುವದು ಗಮನಾರ್ಹ. ಅಮೇರಿಕ ಸಂಯುಕ್ತ ಸಂಸ್ಥಾನವು ಇಷ್ಟರಲ್ಲಿಯೇ ಮನ್ನಣೆ ನೀಡುವ ಸಾಧ್ಯತೆಯೂ ಇದೆ. ಇದಲ್ಲದೇ ಆ ದೇಶಕ್ಕೆ ಬೇರೆ ಮಾರ್ಗವೇ ಉಳಿದಿಲ್ಲ. ಇದೇ ರೀತಿ ಸ್ವತಃ ಪಾಕಿಸ್ತಾನವೂ ಕೂಡ ಸ್ವತಂತ್ರ ಬಂಗ್ಲಾದೇಶಕ್ಕೆ ಮನ್ನಣೆ ನೀಡಲೇಬೇಕಾಗುತ್ತದೆ. ಶೇಖ ಮುಜಿಬುರರು "ಮನ್ನಣೆಯಿಲ್ಲದೇ ಬಂಗ್ಲಾದೇಶ ಮತ್ತು ಪಾಕಿಸ್ತಾನಗಳ ನಡುವೆ ಯಾವ ರೀತಿಯ ಸಂಪರ್ಕವನ್ನು ಹೊಂದಲೂ ತಾವು ಸಿದ್ಧರಿಲ್ಲ" ವೆಂಬ ದಿಟ್ಟ ನಿಲುವನ್ನು ತಳೆದಿದ್ದಾರೆ. ಇಡೀ ಪ್ರಪಂಚದಲ್ಲಿಯೇ ಇಂದು ಜನಸಂಖ್ಯೆಯ ದೃಷ್ಟಿಯಿಂದ ಎಂಟನೆಯ ರಾಷ್ಟ್ರ ಮತ್ತು ಎರಡನೇ ಮುಸ್ಲಿಂ ರಾಷ್ಟ್ರವಾಗಿರುವ ಬಂಗ್ಲಾ

ದೇಶದ ವಾಸ್ತವಿಕ ಅಸ್ತಿತ್ವವನ್ನು ಅಲ್ಲಗಳೆಯುವದು ರಾಜಕೀಯ ಕುರುಡುತನವಲ್ಲದೆ ಮತ್ತೇನು? ತಮ್ಮ ವಿದೇಶಾಂಗ ನೀತಿಯು ನಮ್ಮ ವಾಸ್ತವಿಕತೆಯ ತಳಹದಿಯ ಮೇಲೆ ರೂಪಿತವಾಗಿದೆ. ಎಂದು ಹೇಳುತ್ತಿರುವ ಅಧ್ಯಕ್ಷ ನಿಕ್ಸನ್ನರು ಇಂತಹ ವಾಸ್ತವಿಕತೆಯನ್ನು ಹೇಗೆ ಕಡೆಗಣಿಸುತ್ತಿರುವರೋ ತಿಳಿಯದಾಗಿದೆ. ವಾಸ್ತವಿಕತೆಯ ಈ ಹಿನ್ನೆಲೆಯಲ್ಲಿ ಸ್ವತಂತ್ರ ಬಂಗ್ಲಾದೇಶಕ್ಕೆ ಸಂಯುಕ್ತರಾಷ್ಟ್ರ ಸಂಸ್ಥೆ ಮತ್ತು ಕಾಮನ್‌ವೆಲ್ಥಗಳ ಸದಸ್ಯ ರಾಷ್ಟ್ರವಾಗಿ ಕೂಡಲೇ 'ಪ್ರವೇಶ ದೊರೆಯಬೇಕು'.

ಭಾರತವು ಈಗಾಗಲೇ ತನ್ನ ನೈತಿಕ ಹೊಣೆಯನ್ನು ನಿರ್ವಹಿಸಿದೆ ಮತ್ತು ಈಗಲೂ ನಿರ್ವಹಿಸುತ್ತಿದೆ. ೧೯೭೨ ನೇ ಸಾಲಿನಲ್ಲಿ ಎಂದರೆ ಈ ಒಂದು ವರ್ಷದಲ್ಲಿ ಬಂಗ್ಲಾದೇಶಕ್ಕೆ ಬೇಕಾಗಿರುವ ಅವಶ್ಯಕತೆಗಳಿಗಾಗಿ ಸುಮಾರು ೫೫೦ ಕೋಟಿ ರೂಪಾಯಿಗಳು ಬೇಕಾಗಿವೆ. ಮತ್ತು ಶಾಶ್ವತ ಹಾಗೂ ಸರ್ವತೋಮುಖ ಅಭಿವೃದ್ಧಿಯಾಗಬೇಕಾದರೆ ಸುಮಾರು ಮೂರು ಸಾವಿರ ಕೋಟಿ ರೂಪಾಯಿಗಳು ಬೇಕು. ಪಾಕಿಸ್ತಾನದ ಆಕ್ರಮಣಕಾರರಿಂದ ಧ್ವಂಸಗೊಂಡಿರುವ ಲಕ್ಷಾಂತರ ಮನೆಗಳು, ಸಾವಿರಾರು ಗ್ರಾಮಗಳು, ಅನೇಕ ರಸ್ತೆ, ರೈಲು ಮತ್ತು ಇತರ ಸಾರಿಗೆ ಸಂಪರ್ಕಗಳು ಇವುಗಳನ್ನೆಲ್ಲಾ ಪುನರ್ರಚಿಸಬೇಕಾಗಿದೆ. ಇವೆಲ್ಲಕ್ಕೂ ಹೆಚ್ಚಿನ ಪ್ರಮಾಣದ ಕಬ್ಬಿಣ, ಸಿಮೆಂಟು, ರಾಸಾಯನಿಕ ವಸ್ತುಗಳು, ವಾಹನಗಳು, ಎಂಜನಿಯರಿಂಗ ವಸ್ತುಗಳು, ರಾಸಾಯನಿಕ ಗೊಬ್ಬರ, ಬೀಜ ಮುಂತಾದ ಒಕ್ಕಲುತನ ಸಾಧನ

ಗಳನ್ನು ಒದಗಿಸುವದಕ್ಕೆ ಪ್ರಥಮ ಪ್ರಾಶಸ್ತ್ಯ ದೊರೆಯಬೇಕಾಗಿದೆ. ಅಂತೆಯೇ ಪ್ರಾರಂಭದಲ್ಲಿ ಆಹಾರ ವಸ್ತುಗಳನ್ನು ಕೊಡಬೇಕಾಗಿದೆ. ಭಾರತದಲ್ಲಿಯೇ ಈ ಎಲ್ಲಾ ವಸ್ತುಗಳ ಅಭಾವ ಇದೆ. ಮತ್ತು ಈ ಹೊಣೆಯನ್ನು ಭಾರತ ಒಂದೇ ನಿರ್ವಹಿಸಲಾರದು, ಆದರೂ ಮಾನವೀಯತೆಯ ದೃಷ್ಟಿಯಿಂದ ನಮ್ಮ ದೇಶದಿಂದ ಅಕ್ಕಿ, ಗೋದಿ ಮುಂತಾದ ಅವಶ್ಯಕತೆಗಳನ್ನು ಕಳುಹಿಸಿ ಕೊಡಲಾಗಿದೆ. ಮತ್ತು ಬಂಗ್ಲಾದೇಶದ ಆರ್ಥಿಕ ಪುನರಚನೆಗಾಗಿ ಅನೇಕ ಯೋಜನೆಗಳನ್ನು ರೂಪಿಸುವದರಲ್ಲಿ ಭಾರತವು ಪೂರ್ಣ ಸಹಕಾರ ನೀಡಿದೆ. ನಮ್ಮಲ್ಲಿಂದ ಇಂಜನಿಯರರು, ಡಾಕ್ಟರರು ಮತ್ತು ಇತರ ತಜ್ಞರನ್ನು ಹೆಚ್ಚು ಸಂಖ್ಯೆಯಲ್ಲಿ ಕಳುಹಿಸುವ ಸಾಧ್ಯತೆಯನ್ನು ಪರಿಶೀಲಿಸಬೇಕು. ಆದರೆ ಎಲ್ಲಕ್ಕಿಂತಲೂ ಹೆಚ್ಚಾಗಿ ಪ್ರಪಂಚದ ಇತರ ರಾಷ್ಟ್ರಗಳು ಅದರಲ್ಲಿಯೂ ಸಂಯುಕ್ತರಾಷ್ಟ್ರಸಂಘ ತನ್ನ ವಿವಿಧ ಅಂಗಗಳಾಗಿರುವ, ಯುನಿಸೆಫ್, ಯುನೆಸ್ಕೊ, ಜಾಗತಿಕ ಆಹಾರ ಸಂಸ್ಥೆ, ಮತ್ತು ಆರೋಗ್ಯ ಸಂಸ್ಥೆಗಳ ಸೇವೆಯನ್ನು ಬಂಗ್ಲಾದೇಶದ ಪುನರ್‌ರಚನೆಗೆ ಸಂಪೂರ್ಣವಾಗಿ ಮತ್ತು ವಿಳಂಬವಿಲ್ಲದೇ ವಿನಿಯೋಗಿಸಬೇಕು. ಇಲ್ಲವಾದರೆ ಸಂಯುಕ್ತರಾಷ್ಟ್ರದ ಉಪಯುಕ್ತತೆಯನ್ನೇ ಪ್ರಶ್ನಿಸುವ ಪ್ರಸಂಗ ಬರಬಹುದು.ಇದುವರೆಗೂ ಇಡೀ ಪಾಕಿಸ್ತಾನದ ಆರ್ಥಿಕ ರಚನೆಯ ಬೆನ್ನೆಲುಬಾಗಿದ್ದ ಪೂರ್ವ ಬಂಗಾಲವು ಸ್ವತಂತ್ರ ಬಂಗ್ಲಾದೇಶವಾಗಿ ಆರ್ಥಿಕ ಅಭಿವೃದ್ಧಿಗೆ ಅವಶ್ಯವಾದ ಎಲ್ಲಾ ಸಾಧನಮೂಲಗಳನ್ನು ಪಡೆದಿದ್ದು ಇನ್ನುಮೇಲೆ ತನ್ನ ಅಭಿವೃದ್ಧಿಗಾಗಿ ಅವುಗಳನ್ನು ಬಳಸುವ ಅವಕಾಶ ಒದಗಿರುವುದರಿಂದ ಅದು ಸರ್ವತೋ

ಮುಖಿ ಅಭಿವೃದ್ಧಿ ಹೊಂದುವುದರಲ್ಲಿ ಸಂಶಯವೇ ಇಲ್ಲ. ಈ ಅಭಿವೃದ್ಧಿಗೆ ಚಾಲನ ದೊರೆಯುವವರೆಗೆ ಹೊರಗಿನ ಸಹಾಯ ಬೇಕು. ಇಂದು ಬಂಗ್ಲಾದೇಶದಲ್ಲಿ ರಕ್ಷಣಾ ಪಡೆಗಳ ಪುನರ್ನಿರ್ಮಾಣವೇ ಆಗಬೇಕಾಗಿದೆ. ಅಲ್ಲಿಯವರೆಗೂ ಭಾರತದಮೇಲೆ ರಕ್ಷಣೆಯ ಭಾರ ಬೀಳುವದು ಸಹಜ. ಆದರೂ ಅವಶ್ಯಕತೆಗಿಂತ ಹೆಚ್ಚಿಗೆ ಒಂದುದಿನವೂ ಭಾರತೀಯ ಸೈನ್ಯ ಬಂಗ್ಲಾ ದೇಶದಲ್ಲಿರುವದಿಲ್ಲ ವೆಂದು ನಾವು ಈಗಾಗಲೇ ತಿಳಿಸಿದ್ದೇವೆ. ಮತ್ತು ಎಲ್ಲಾ ಭಾರತೀಯಸೈನ್ಯವನ್ನು ಈಗಾಗಲೇ ವಾಪಸ ಕರೆಸಿಕೊಳ್ಳಲಾಗಿದೆ.

ಕೊನೆಯದಾಗಿ, ಭಾರತ ಬಂಗ್ಲಾಗಳ ನಡುವೆ ಇರುವ ಭೌಗೋಲಿಕ, ಐತಿಹಾಸಿಕ, ಸಾಂಸ್ಕೃತಿಕ, ಮತ್ತು ಆರ್ಥಿಕ ಸಹಕಾರ ಸೌಹಾರ್ದಗಳು ಎಷ್ಟರಮಟ್ಟಿಗೆ ವಾಸ್ತವಿಕ ತಳಹದಿಯಮೇಲೆ ರೂಪಿತವಾಗಿವೆ ಮತ್ತು ಅವು ಶಾಶ್ವತವಾಗಬಲ್ಲವೇ ಎಂಬ ಪ್ರಶ್ನೆಯನ್ನು ಪರಿಶೀಲಿಸಬೇಕಾಗಿದೆ. ರಾಷ್ಟ್ರ ರಾಷ್ಟ್ರಗಳ ಸಂಬಂಧಗಳು ಬಹುಮಟ್ಟಿಗೆ ಅವುಗಳ ಪರಸ್ಪರ ಹಿತರಕ್ಷಣೆಯ ದೃಷ್ಟಿಯಿಂದ ರೂಪಿತವಾಗಬೇಕೇ ಹೊರತು ಕೇವಲ ಆದರ್ಶಗಳ ಮೇಲಲ್ಲವೆಂದು ವಾಸ್ತವಿಕತಾವಾದಿಗಳು ಹೇಳುವದುಂಟು ಇದು ಬಹಳ ಮಟ್ಟಿಗೆ ಸರಿಯಾದ ವಾದವೇ. ಆದರೂ ಈ ಸಂಬಂಧಗಳು ತ್ರಿಕಾಲಬಾಧಿತವಾಗಬೇಕಾದರೆ ಆದರ್ಶಗಳಲ್ಲಿಯೂ ಸಾಮ್ಯವಿರುವದು ಅನಿವಾರ್ಯ. ಭಾರತದ ಬಗ್ಗೆ ಅಧೀನ ಬಂಗಾಲದಲ್ಲಿ ಪಾಕಿಸ್ತಾನದ ಪ್ರಚೋದನೆ. ಭಾರತವನ್ನು ನಾಶಮಾಡಿರಿ, ಹಿಂದೂಗಳನ್ನು ದ್ವೇಷಿಸಿರಿ, ಮುಂತಾದ ಘೋರಣೆಗಳಿಂದಾಗಿ

ಭಾರತದ ಬಗ್ಗೆ ಪ್ರತ್ಯಕ್ಷ ವಿರೋಧವಿದ್ದಿತು. ಅಲ್ಲಿ ಎರಡುನೂರು ವರ್ಷಗಳ ನೆನಪುಗಳು ಹಸಿರಾಗಿದ್ದವು. ಹಿಂದೂ ಜಮೀನದಾರರ ದಬ್ಬಾಳಿಕೆಯನ್ನು ಅವರು ಮರೆತಿರಲಿಲ್ಲ. ಹಿಂದೂ ಎಂಬ ಪದ, ಹಿಂದುಸ್ತಾನದ ಹೆಸರು ಇವು ಅಪಥ್ಯವಾಗಿದ್ದವೆಂಬ ಅಂಶವನ್ನು ಡಾಮ್ ಮೋರೇಸ್ ಮುಂತಾದವರು ತಮ್ಮ ಪ್ರತ್ಯಕ್ಷ ಅನುಭವ ದಿಂದ ವಿವರಿಸಿದ್ದಾರೆ. ೧೯೦೬ ರಲ್ಲಿ ಮುಸ್ಲಿಂ ಲೀಗ್ ಉದಯಿ ಸಿದ್ದು ಈ ಭಾಗದಲ್ಲಿಯೇ, ಮತ್ತು ೧೯೪೦ ರಲ್ಲಿ ಪಾಕಿಸ್ತಾನ ಉದಯ ಬೇಡಿಕೆಯ ನಿರ್ಣಯವನ್ನು ಲಾಹೋರ ಅಧಿವೇಶನ ದಲ್ಲಿ ಮಂಡಿಸಿದವರು ಪೂರ್ವ ಬಂಗಾಲದ ನಾಯಕರೇ ಎಂಬು ದನ್ನು ಮರೆಯದವರು ಇಂತಹ ಭಾರತ ವಿರೋಧಿ ಹಿನ್ನೆಲೆ ಯಲ್ಲಿ ಸ್ವತಂತ್ರ ಬಂಗ್ಲಾದೇಶದ ಮತ್ತು ಭಾರತಗಳ ನಡುವೆ ತ್ರಿಕಾಲಬಾಧಿತ ಸ್ನೇಹ ಸಾಧ್ಯವೇ ಎಂದು ಪ್ರಶ್ನಿಸಿದ್ದಾರೆ. ಇವೆಲ್ಲಾ ಸತ್ಯ ಸಂಗತಿಗಳೇ. ಇಂತಹ ಅನುಮಾನವೂ ಸಹಜವೇ. ಆದರೆ ೧೯೭೧ ರಲ್ಲಿ ಜರುಗಿದ ಘಟನೆಗಳೂ ಅಷ್ಟೇ ಸತ್ಯವಾದವು. ಇವು ಇನ್ನೂರು ವರ್ಷಗಳ ಕಹಿ ನೆನಪುಗಳನ್ನು ಅಳಿಸಿ ಒಂದು ಹೊಸ ಅಧ್ಯಾಯವನ್ನೇ ಪ್ರಾರಂಭಿಸಿವೆ. ಈ ಘಟನೆಗಳು ಬಂಗ್ಲಾದೇಶದ ಉದಯಕ್ಕೆ ಕಾರಣವಾದವು. ಭಾರತವು ಬಂಗ್ಲಾದೇಶದ ಉದ ಯದಲ್ಲಿ ಬಹು ಮುಖ್ಯ ಪಾತ್ರವನ್ನು ವಹಿಸಿತು. ಮೇಲಾಗಿ ನಮ್ಮ ಆರ್ಥಿಕ ಹಾಗೂ ಭದ್ರತಾ ದೃಷ್ಟಿಯಿಂದಲೂ ನಾವಾ ದರೂ ಹಳೆಯದನ್ನು ಮರೆತು ನಮ್ಮ ಸಹಕಾರ ಹಸ್ತವನ್ನು ನೀಡಿ ಸ್ನೇಹ ಸಂವರ್ಧನೆಗಾಗಿ ದುಡಿಯಬೇಕು. ಅಂತೆಯೇ ಬಂಗ್ಲಾದೇಶದ ನಾಯಕರು ಹಾಗೂ ಜನತೆಯೂ ಸಹ ಹಳೆಯ

ವನ್ನು ಮತ್ತು ಸಮೃದ್ಧ ಬಂಗ್ಲಾದೇಶದ ರಚನೆಗಾಗಿ ಭಾರತದೊಡನೆ ಹಾಗೂ ಇತರ ರಾಷ್ಟ್ರಗಳೊಡನೆ ಸ್ನೇಹ ಸೌಹಾರ್ದಗಳನ್ನು ಬೆಳೆಸಿಕೊಳ್ಳಬೇಕು. ಭಾರತದ ಉಪಖಂಡದಲ್ಲಿ ಶಾಶ್ವತ ಶಾಂತಿ ನೆಲೆಸಬೇಕಾದರೆ ಇಂತಹ ವಾತಾವರಣ ನಿರ್ಮಾಣವಾಗಲೇಬೇಕು.

● ●

# ೮

# ಹಿನ್ನುಡಿ

ಬಂಗ್ಲಾದೇಶದ ಉದಯದ ಹಿನ್ನಲೆ,ಅದರಲ್ಲಡಗಿದ್ದ ರಾಷ್ಟ್ರೀಯತೆಯ ಮೂಲ ಮತ್ತು ನವೋದಿತ ರಾಷ್ಟ್ರ ಎದುರಿಸಬೇಕಾಗಿರುವ ಹಲವು ಸಮಸ್ಯೆಗಳ ಕಿರು ಪರಿಚಯವನ್ನು ಇದುವರೆಗೆ ಮಾಡಿಕೊಡಲಾಗಿದೆ. ಈ ಕಿರು ಹೊತ್ತಿಗೆಯನ್ನು ಸಿದ್ಧಪಡಿಸಿ ಮುದ್ರಣವಾಗುತ್ತಿದ್ದಂತೆಯೇ ಹಲವಾರು ಪ್ರಮುಖ ಘಟನೆಗಳು ಜರುಗಿವೆ ಮತ್ತು ಜರುಗುತ್ತಿವೆ. ಇಂತಹ ಘಟನೆಗಳಲ್ಲಿ ಮಾರ್ಚ ೧೯, ೧೯೭೨ ರಂದು ಡಾಕ್ಕಾದಲ್ಲಿ ಸಹಿ ಮಾಡಲಾದ ಭಾರತ-ಬಂಗ್ಲಾದೇಶಗಳ ಸ್ನೇಹ, ಸಹಕಾರ ಮತ್ತು ಶಾಂತಿ ಒಪ್ಪಂದವು ಗಮನಾರ್ಹವಾಗಿದೆ.

ಸ್ವತಂತ್ರ ಬಂಗ್ಲಾದೇಶದ ಉದಯವಾದಾಗಿನಿಂದ ಈ ಎರಡು ನೆರೆ ರಾಷ್ಟ್ರಗಳಲ್ಲಿ ಮಧುರ ಮತ್ತು ಅರ್ಥಪೂರ್ಣ ಸಂಬಂಧಗಳನ್ನು ಬೆಳೆಸಿಕೊಂಡು ಬರಲು ಸರ್ವ ಪ್ರಯತ್ನ ಮಾಡಲಾಗುತ್ತಿದೆ. ತನ್ನ ಕಷ್ಟಗಳನ್ನು ಬದಿಗಿರಿಸಿ ಭಾರತವು ಬಂಗ್ಲಾದೇಶಕ್ಕೆ ಸಾಧ್ಯವಾದಷ್ಟು ಆರ್ಥಿಕ ಸಹಾಯವನ್ನು ಒದಗಿಸುತ್ತಿದೆ. ೧೯೭೨ ಜೂನ ತಿಂಗಳ ಹೊತ್ತಿಗೆ ಸುಮಾರು ಏಳು ಟನ್ನುಗಳಷ್ಟು ಆಹಾರ ಧಾನ್ಯಗಳನ್ನು ಭಾರತವು ಆ ದೇಶಕ್ಕೆ ಕೊಡಮಾಡಲು ಒಪ್ಪಿಕೊಂಡಿದೆ. ಇದೂ ಅಲ್ಲದೆ ಇನ್ನೂ ಹಲವಾರು ರೀತಿಯಲ್ಲಿ

ಸಹಾಯ ಮಾಡುತ್ತಾ ಬಂದಿದೆ ಮತ್ತು ಮುಂದೆಯೂ ಮಾಡಲಿದೆ. ಈ ಎಲ್ಲಾ ಸಹಾಯ ಕಾರ್ಯಕ್ರಮಗಳಿಗೆ ಒಂದು ನಿರ್ದಿಷ್ಟ ಸ್ವರೂಪವನ್ನೀಯಲು ಮತ್ತು ಉಭಯ ರಾಷ್ಟ್ರಗಳ ಬಾಂಧವ್ಯಗಳನ್ನು ಸುಭದ್ರ ತಳಹದಿಯ ಮೇಲೆ ರೂಪಿಸಲು ಭಾರತದ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರು ಮಾರ್ಚ ೧೭, ೧೯೭೨ ರಿಂದ ಎರಡು ದಿನಗಳ ಸದಿಚ್ಛಾ ಪ್ರವಾಸವನ್ನು ಕೈಕೊಂಡರು. ಸ್ವತಂತ್ರ ಬಂಗ್ಲಾದೇಶಕ್ಕೆ ಅವರಿತ್ತ ಈ ಪ್ರಥಮ ಭೆಟ್ಟಿಯ ಕಾಲದಲ್ಲಿ ಶ್ರೀಮತಿ ಗಾಂಧಿಯವರು ಬಂಗ್ಲಾದೇಶದ ಜನತೆಗೆ ಭಾರತ ಜನತೆಯ ಶುಭಕಾಮನೆಗಳನ್ನು ತಿಳಿಸಿದರಲ್ಲದೆ ಎರಡೂ ರಾಷ್ಟ್ರಗಳು ಉಭಯತರ ಅಭಿವೃದ್ಧಿ ಮತ್ತು ಭಾರತ ಉಪಖಂಡದಲ್ಲಿ ಶಾಂತಿ ಸ್ಥಾಪನೆಗೆ ಎಲ್ಲಾ ಪ್ರಯತ್ನಗಳನ್ನೂ ಮಾಡುವದಾಗಿ ಸಾರಿದರು. ಇದೇ ಉದ್ದೇಶದಿಂದಲೇ ಈ ಒಪ್ಪಂದಕ್ಕೆ ಶ್ರೀಮತಿ ಗಾಂಧಿ ಮತ್ತು ಷೇಕ ಮುಜೀಬುರ ರಹಮಾನರು ಅಂಕಿತ ಹಾಕಿದರು.

ಇಪ್ಪತ್ತೈದು ವರ್ಷಗಳ ಅವಧಿಯ ಭಾರತ–ಬಂಗ್ಲಾ ದೇಶಗಳ ಸ್ನೇಹ, ಸಹಕಾರ ಮತ್ತು ಶಾಂತಿ ಒಪ್ಪಂದದಲ್ಲಿ ೧೨ ವಿಧಿಗಳಿದ್ದು ಅದರ ಪೂರ್ಣ ಪಾಠದ ಅನುವಾದ ಈ ರೀತಿ ಇದೆ :

೧. ಭಾರತ ಮತ್ತು ಬಂಗ್ಲಾದೇಶಗಳ ಜನತೆಯು ಯಾವ ಘನವಾದ ಆದರ್ಶಗಳಿಗಾಗಿ ಸರ್ವತ್ಯಾಗಮಾಡಿ ಹೋರಾಡಿದರೋ ಅಂತಹ ಆದರ್ಶಗಳಿಂದ ಪ್ರೇರಿತರಾದ ಈ ಎರಡೂ ರಾಷ್ಟ್ರಗಳು

ಶಾಶ್ವತ ಶಾಂತಿ ಮತ್ತು ಸಹಕಾರಗಳಿಗಾಗಿ ಶ್ರಮಿಸುವುದಾಗಿ ಒಪ್ಪಿಕೊಂಡಿವೆ. ಪರಸ್ಪರರ ಪ್ರಾದೇಶಿಕ ಸಮಗ್ರತೆ, ಸ್ವಾತಂತ್ರ್ಯ ಮತ್ತು ಸಾರ್ವಭೌಮತ್ವವನ್ನು ಮಾನ್ಯ ಮಾಡುವುದಲ್ಲದೆ ಪರಸ್ಪರರ ಆಂತರಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡುವುದಿಲ್ಲವೆಂದು ಪ್ರತಿಜ್ಞೆಗೈಯುತ್ತವೆ.

ಈ ಆದರ್ಶಗಳು ಮತ್ತು ತತ್ವಗಳೂ ಅಲ್ಲದೆ ಪರಸ್ಪರರ ಸಮಾನತೆ ಮತ್ತು ಹಿತರಕ್ಷಣೆಯ ದೃಷ್ಟಿಯಿಂದ ಎರಡೂ ರಾಷ್ಟ್ರಗಳ ನಡುವೆ ಸ್ನೇಹ, ಸೌಹಾರ್ದ ಮತ್ತು ಉತ್ತಮ ನೆರೆಹೊರೆಯ ಸಂಬಂಧ ಹಾಗೂ ಸರ್ವಾಂಗೀಣ ಸಹಕಾರಗಳನ್ನು ವೃದ್ಧಿಗೊಳಿಸುವ ಪ್ರಯತ್ನ ಮಾಡಲಾಗುವುದೆಂದು ಒಪ್ಪಲಾಗಿದೆ.

೨. ಜಾತಿ, ವರ್ಣ ಅಥವಾ ಬುಡಕಟ್ಟುಗಳ ಆಧಾರದ ಮೇಲೆ ನಿರ್ಮಿತವಾದ ವರ್ಣಭೇಧನೀತಿ ಮತ್ತು ವಸಾಹತುವಾದವನ್ನು ಎರಡೂ ರಾಷ್ಟ್ರಗಳೂ ಖಂಡಿಸುವುವಲ್ಲದೆ ಅವುಗಳ ನಿರ್ಮೂಲನೆಗೆ ಪಣತೊಟ್ಟಿವೆ. ಎಲ್ಲಾ ಜನತೆಯ ಮತ್ತು ರಾಷ್ಟ್ರಗಳ ನಡುವೆ ಸಮಾನತೆಯ ತತ್ವವನ್ನು ಆಧರಿಸಿ ಸಂಬಂಧಗಳನ್ನು ಬೆಳೆಸುವುದಾಗಿ ಸಾರುತ್ತವೆ.

ಉಭಯ ರಾಷ್ಟ್ರಗಳು ಈ ಆದರ್ಶಗಳಿಗನುಗುಣವಾಗಿ ಇತರ ರಾಷ್ಟ್ರಗಳೊಡನೆ ಸಹಕರಿಸುವುವು ಮತ್ತು ವಸಾಹತುವಾದ ಹಾಗೂ ವರ್ಣಭೇದ ನೀತಿಯ ವಿರುದ್ಧ ಹೋರಾಡುತ್ತಿರುವ

ಜನತೆಯು ಸ್ವಾತಂತ್ರ್ಯ ಸಮರ ಮತ್ತು ವಿಮೋಚನಾ ಚಳುವಳಿಯಲ್ಲಿ ಸಹಕರಿಸುವುವು.

೩. ಉಭಯ ರಾಷ್ಟ್ರಗಳು ಜಗತ್ತಿನಲ್ಲಿರುವ ದ್ವೇಷವನು ನಿವಾರಿಸಲು, ಅಂತರ ರಾಷ್ಟ್ರೀಯ ಶಾಂತಿಯನ್ನು ಸ್ಥಾಪಿಸಲು, ರಾಷ್ಟ್ರೀಯ ಸಮಗ್ರತೆ, ಸಾರ್ವಭೌಮತ್ವ ಮತ್ತು ಸ್ವಾತಂತ್ರ್ಯಗಳನ್ನು ರಕ್ಷಿಸುವಲ್ಲಿ ಅಲಿಪ್ತ ನೀತಿ ಮತ್ತು ಶಾಂತಿಯುತ ಸಹಬಾಳ್ವೆಯ ತತ್ವದಲ್ಲಿ ಧೃಡ ವಿಶ್ವಾಸ ವ್ಯಕ್ತಮಾಡುತ್ತವೆ.

೪. ಉಭಯ ರಾಷ್ಟ್ರಗಳ ಹಿತಾಸಕ್ತಿಗಳ ಮೇಲೆ ಪರಿಣಾಮವನ್ನು ಬೀರುವಂತಹ ಅಂತರರಾಷ್ಟ್ರೀಯ ಸಮಸ್ಯೆಗಳ ಬಗೆಗೆ ಎರಡೂ ರಾಷ್ಟ್ರಗಳು ಕಾಲಕಾಲಕ್ಕೆ ಭೆಟ್ಟಿ ಮತ್ತು ವಿಚಾರ ವಿನಿಮಯಗಳ ಮೂಲಕ ನಿಯಮಿತ ಸಂಪರ್ಕಗಳನಿಟ್ಟುಕೊಳ್ಳುವುದಾಗಿ ಪ್ರತಿಜ್ಞೆಗೈಯ್ಯಲಾಗಿದೆ.

೫. ಆರ್ಥಿಕ, ವೈಜ್ಞಾನಿಕ ಮತ್ತು ತಾಂತ್ರಿಕ ವಿಷಯಗಳು ಮತ್ತು ವಾಣಿಜ್ಯ, ಸಾರಿಗೆ ಸಂಪರ್ಕ ಕ್ಷೇತ್ರಗಳಲ್ಲಿ ಪರಸ್ಪರ ಸಮಾನತೆ, ಸೌಲಭ್ಯ ಮತ್ತು 'ವಿಶೇಷ ಸೌಕರ್ಯ ನೀತಿ'ಯ ಆಧಾರದ ಮೇಲೆ ಉಭಯ ರಾಷ್ಟ್ರಗಳು ತಮ್ಮ ನಡುವಿನ ಸಹಕಾರವನ್ನು ಬಲಪಡಿಸುವ ಯತ್ನವನ್ನು ಮುಂದುವರಿಸುವುವು.

೬. ಎರಡೂ ರಾಷ್ಟ್ರಗಳು ನೆರೆ ನಿಯಂತ್ರಣ, ನದಿ ಜಲಾನಯನ ಭೂಮಿಯ ಅಭಿವೃದ್ಧಿ, ಜಲ–ವಿದ್ಯುತ್ ಬೆಳವಣಿಗೆ ಮತ್ತು

ನೀರಾವರಿ ಕ್ಷೇತ್ರಗಳಲ್ಲಿ ಸಂಯುಕ್ತ ಸಮೀಕ್ಷೆ ಮತ್ತು ಸಂಯುಕ್ತ ಕಾರ್ಯಾಚರಣೆಯನ್ನು ಕೈಕೊಳ್ಳುವುವು.

೭. ಕಲೆ, ಸಾಹಿತ್ಯ, ಶಿಕ್ಷಣ, ಸಂಸ್ಕೃತಿ, ಕ್ರೀಡೆಗಳು ಮತ್ತು ಸ್ವಾಸ್ಥ್ಯ ಈ ಕ್ಷೇತ್ರಗಳ ಅಭಿವೃದ್ಧಿಗಾಗಿ ಉಭಯ ರಾಷ್ಟ್ರಗಳು ಸತತ ದುಡಿಯುವುವು.

೮. ಎರಡೂ ರಾಷ್ಟ್ರಗಳ ನಡುವಣ ಸ್ನೇಹ ಸಂಬಂಧಗಳಿಗನುಗುಣವಾಗಿ ಈ ಒಪ್ಪಂದಕ್ಕೆ ಸಹಿಹಾಕಿರುವ ರಾಷ್ಟ್ರಗಳು ಯಾರೊಬ್ಬರ ವಿರುದ್ಧ ಯಾವುದೇ ಸೈನಿಕ ಒಪ್ಪಂದಮಾಡಿಕೊಳ್ಳುವುದಿಲ್ಲ. ಅಥವಾ ಅಂತಹ ಒಪ್ಪಂದದಲ್ಲಿ ಭಾಗವಹಿಸುವುದಿಲ್ಲ ಎಂದು ಪ್ರತಿಜ್ಞೆಗೈಯುತ್ತವೆ.

ಒಂದರ ವಿರುದ್ಧ ಮತ್ತೊಂದು ರಾಷ್ಟ್ರ ಯಾವುದೇ ಆಕ್ರಮಣ ನಡೆಸುವುದರಿಂದ ದೂರವಿರಬೇಕು ಎಂದು ಒಪ್ಪಲಾಗಿದೆ. ಉಭಯು ತರ ಭದ್ರತೆಗೆ ಗಂಡಾಂತರ ಒದಗುವಂತಹ ಯಾವುದೇ ಚಟುವಟಿಕೆಗೆ ಪ್ರೋತ್ಸಾಹ ಕೊಡುವುದಿಲ್ಲ ಮತ್ತು ತಮ್ಮ ಭೂಪ್ರದೇಶವನ್ನು ಯಾರೊಬ್ಬರ ವಿರುದ್ಧ ಉಪಯೋಗಿಸಲು ಅವಕಾಶ ಕೊಡುವುದಿಲ್ಲ.

೯. ಉಭಯತರಲ್ಲಿ ಯಾವುದಾದರೊಂದು ರಾಷ್ಟ್ರದ ವಿರುದ್ಧ ಘರ್ಷಣೆ, (ಯುದ್ಧ)ಯಲ್ಲಿ ತೊಡಗಿರುವ ಯಾವುದೇ ಅನ್ಯ ರಾಷ್ಟ್ರಕ್ಕೆ ಸೈನಿಕ ನೆರವು ನೀಡುವುದಿಲ್ಲವೆಂದು ಒಪ್ಪಿಕೊಳ್ಳಲಾಗಿದೆ.

ಉಭಯ ದೇಶಗಳ ಪೈಕಿ ಯಾವದೇ ದೇಶದ ಮೇಲೆ ಆಕ್ರಮಣ ನಡೆದರೂ ಅಥವಾ ಆಕ್ರಮಣದ ಬೆದರಿಕೆ ಉಂಟಾದರೂ ಕೂಡಲೇ ಎರಡೂ ದೇಶಗಳು ಪರಸ್ಪರ ಸಮಾಲೋಚನೆ ನಡೆಸಿ ಅದನ್ನು ನಿವಾರಿಸಲು ಸೂಕ್ತ ಕ್ರಮ ಕೈಕೊಂಡು ಉಭಯ ರಾಷ್ಟ್ರಗಳಲ್ಲಿ ಶಾಂತಿ ಮತ್ತು ಭದ್ರತೆಯು ನೆಲಸುವಂತೆ ಮಾಡುವುದಾಗಿ ಒಪ್ಪುತ್ತವೆ.

೧೦. ಈ ಒಪ್ಪಂದಕ್ಕೆ ವಿರೋಧವಾಗುವಂತಹ, ಯಾವದೇ ರಾಷ್ಟ್ರದ ಹಿತಕ್ಕೆ ಧಕ್ಕೆ ತರುವಂತಹ ಯಾವದೇ ಗುಪ್ತ ಅಥವಾ ಬಹಿರಂಗ ಒಪ್ಪಂದ ಅಥವಾ ಕಟ್ಟುಪಾಡಿಗೆ ಒಳಗಾಗುವುದಿಲ್ಲವೆಂದು ಈ ಒಪ್ಪಂದಕ್ಕೆ ಸಹಿ ಹಾಕಿರುವ ರಾಷ್ಟ್ರಗಳು ಗಂಭೀರವಾದ ಪ್ರತಿಜ್ಞೆ ಮಾಡುತ್ತವೆ.

೧೧. ಇಪ್ಪತ್ತೈದು ವರ್ಷಗಳ ಅವಧಿಗಾಗಿ ಸಹಿ ಹಾಕಲಾಗಿರುವ ಈ ಒಪ್ಪಂದದ ಅವಧಿಯನ್ನು ಪರಸ್ಪರ ಒಪ್ಪಿಗೆಯ ಮೇಲೆ ಬೆಳಸಬಹುದಾಗಿದೆ. ಮತ್ತು ಈ ಒಪ್ಪಂದವು ಅದಕ್ಕೆ ಅಂಕಿತ ಬಿದ್ದ ಕ್ಷಣದಿಂದಲೇ ಜಾರಿಗೆ ಬರುತ್ತದೆ.

೧೨. ಈ ಒಪ್ಪಂದದ ಯಾವುದೇ ವಿಧಿ ಅಥವಾ ವಿಧಿಗಳ ಬಗೆಗೆ ಭಿನ್ನಾಭಿಪ್ರಾಯವುಂಟಾದಲ್ಲಿ ಅಂತಹ ಭಿನ್ನಾಭಿಪ್ರಾಯ(ಗಳ)ನ್ನು ಉಭಯ ತಾಪಿ ಶಾಂತಿಯುತ ಮಾರ್ಗದಲ್ಲಿ ಮತ್ತು ಪರಸ್ಪರ ಗೌರವ ಮತ್ತು ತಿಳುವಳಿಕೆಯ ಆಧಾರದ ಮೇಲೆ ಬಗೆಹರಿಸಿಕೊಳ್ಳುವುದಾಗಿ ಒಪ್ಪಿಕೊಳ್ಳಲಾಗಿದೆ.

ಭಾರತದ ಪ್ರಧಾನಮಂತ್ರಿ ಇಂದಿರಾ ಗಾಂಧಿ ಹಾಗೂ ಬಂಗ್ಲಾ ದೇಶದ ಪ್ರಧಾನಮಂತ್ರಿ ಶೇಖ ಮುಜೀಬುರ್ ಹಮಾನರು ಮಾರ್ಚ ೧೯, ೧೯೭೨ ರಂದು ಢಾಕ್ಕಾದಲ್ಲಿ ಅಂಕಿತಹಾಕಿದ ಈ ಸ್ನೇಹ ಒಪ್ಪಂದವು ಭಾರತ-ಬಂಗ್ಲಾ ಸಂಬಂಧಗಳನ್ನು ವೃದ್ಧಿಗೊಳಿಸುವ ದಿಶೆಯಲ್ಲಿ ಒಂದು ಪ್ರಮುಖ ಹೆಜ್ಜೆಯಾಗಿದೆ. ಆಗಸ್ಟ ೯,೧೯೭೧ ರಂದು ಅಂಕಿತ ಹಾಕಲಾಗಿದ್ದ ಭಾರತ-ಸೋವಿಯಟ್ ಸ್ನೇಹ, ಸಹಕಾರ ಮತ್ತು ಪರಸ್ಪರ ಸಹಾಯ ಒಪ್ಪಂದದ ಮಾದರಿಯಲ್ಲಿಯೇ ಈ ಒಪ್ಪಂದವು ರೂಪಿತವಾಗಿದೆ. ಆದರೆ ಭಾರತ-ಸೋವಿಯಟ್ ಒಪ್ಪಂದವು ಇಪ್ಪತ್ತು ವರ್ಷಗಳ ಅವಧಿಯದಾಗಿದ್ದು. ಈ ಒಪ್ಪಂದವು ಇಪ್ಪತ್ತೈದು ವರ್ಷಗಳ ಅವಧಿಯನ್ನು ಹೊಂದಿದೆ. ಬಂಗ್ಲಾದೇಶದ ವಿಮೋಚನೆಯು ಆ ದೇಶದ ಇತಿಹಾಸದಲ್ಲಿ ಮೊದಲನೆಯ ಮಹತ್ವದ ಅಧ್ಯಾಯವಾಗಿದ್ದು, ಈ ಸ್ನೇಹ ಒಪ್ಪಂದವು ಎರಡನೆಯ ಅಧ್ಯಾಯವಾಗಿದೆಯೆನ್ನಬಹುದು. ಈ ಒಪ್ಪಂದಕ್ಕೆ ಪ್ರಧಾನಿ ಇಂದಿರಾ ಗಾಂಧಿಯವರು ಬಂಗ್ಲಾದೇಶಕ್ಕೆ ಕೊಟ್ಟ ಪ್ರಥಮ ಭೆಟ್ಟಿಯಲ್ಲಿಯೇ ಅಂಕಿತ ಹಾಕಿದುದು ಅವರ ಮುತ್ಸದ್ದಿತನವನ್ನು ಎತ್ತಿ ತೋರಿಸುತ್ತದೆ. ಎರಡೂ ರಾಷ್ಟ್ರಗಳ ಬಾಂಧವ್ಯ ಈ ಭೂಭಾಗದ ಶಾಂತಿ ಮತ್ತು ರಕ್ಷಣೆಗೆ ಅತ್ಯಾವಶ್ಯ. ಅಂತಹ ಬಾಂಧವ್ಯನ್ನು ವೃದ್ಧಿಗೊಳಿಸಲು ಈ ಮಾದರಿಯ ಶಾಂತಿ, ಸ್ನೇಹ ಮತ್ತು ಸಹಕಾರದ ಒಪ್ಪಂದವು ಸಹಕಾರಿಯಾಗುವುದೆಂದು ಆಶಿಸಬಹುದಾಗಿದೆ.

ಈ ಒಪ್ಪಂದದ ಹಲವಾರು ವಿಧಿಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿ

ಸಿದಾಗ ಕೆಲವು ಮುಖ್ಯವಾದ ಅಂಶಗಳು ಕಂಡು ಬರುತ್ತವೆ. ಮೊದಲನೆಯದಾಗಿ, ಈ ಒಪ್ಪಂದವು ಬಂಗ್ಲಾದೇಶಕ್ಕೆ ಭಾರತದ ಸ್ನೇಹದ ಗಾಢತೆಯ ಬಗ್ಗೆ ವಿಶ್ವಾಸವನ್ನು ಹುಟ್ಟಿಸಲು ಸಹಕಾರಿಯಾಗಿದೆ. ಎರಡನೆಯದಾಗಿ, ಈ ಒಪ್ಪಂದವು ಕೇವಲ ಮಿಲಿಟರಿ ಅಥವ ರಕ್ಷಣಾ ಒಪ್ಪಂದವಾಗಿರದೆ ಸಮಗ್ರ ವಿಷಯಗಳನ್ನೊಳಗೊಂಡ ವ್ಯಾಪಕ ಒಪ್ಪಂದದ ರೂಪದಲ್ಲಿದೆ. ಪಾಕಿಸ್ತಾನವು ತನ್ನ ನಿರಾಶೆ ಮತ್ತು ಕೋಪ ಮನೋಭಾವನೆಯಲ್ಲಿ ಈ ಒಪ್ಪಂದಕ್ಕೆ ಅಪಾರ್ಥ ಕಲ್ಪಿಸುವ ಪ್ರಯತ್ನ ಮಾಡುತ್ತಿದೆ. ಅಂತಹ ರಾಷ್ಟ್ರಗಳು ಒಪ್ಪಂದದ ೯ನೆಯ ವಿಧಿಯನ್ನು ಮಾತ್ರ ಎತ್ತಿಹಿಡಿದು ಇದು ಸೈನಿಕ ಒಪ್ಪಂದವಲ್ಲದೆ ಮತ್ತೇನು ಎಂದು ಪ್ರಶ್ನಿಸಿವೆ. ಆದರೆ ಈ ಟೀಕೆ ಸರಿಯಲ್ಲವೆಂಬುದು ಒಪ್ಪಂದವ ಪೂರ್ಣ ಪಾಠವನ್ನು ಓದಿದಾಗ ಸ್ಪಷ್ಟವಾಗುತ್ತದೆ. ಭಾರತ ಮತ್ತು ಬಂಗ್ಲಾದೇಶಗಳು ನೆರೆಹೊರೆಯ ರಾಷ್ಟ್ರಗಳು. ಅವುಗಳ ಹಿತಾಸಕ್ತಿಗಳು ಪರಸ್ಪರ ಅವಲಂಬಿತವಾಗಿವೆ. ಒಂದು ಕಾಲಕ್ಕೆ ಒಂದೇ ರಾಷ್ಟ್ರದ ಭಾಗವಾಗಿದ್ದ ಬಂಗಾಲ ಕಾರಣಾಂತರಗಳಿಂದ ಭಾರತದಿಂದ ಬೇರ್ಪಡಿಸಲ್ಪಟ್ಟಿತು. ಇಷ್ಟು ನಿಕಟವಾಗಿರುವ ರಾಷ್ಟ್ರಗಳು ಪರಸ್ಪರ ಸಹಕಾರ ಮತ್ತು ಸಹ ಬಾಳ್ವೆಯ ತತ್ವಗಳನ್ನು ಕಡೆಗಣಿಸುವುದು ಹಾನಿಕಾರಕ ಪ್ರವೃತ್ತಿಯಾದೀತು. ಅಂತೆಯೇ ಈ ಒಪ್ಪಂದವನ್ನು ಸ್ನೇಹ, ಸಹಕಾರ ಮತ್ತು ಶಾಂತಿಯ ಒಪ್ಪಂದವೆಂದು ಕರೆಯಲಾಗಿದೆ. ರಾಷ್ಟ್ರಾಭ್ಯುದಯದ ಅನೇಕ ಪ್ರಮುಖ ಕ್ಷೇತ್ರಗಳಲ್ಲಿ ಸಹಕಾರವನ್ನು ಸ್ಥಾಪಿಸುವುದು ಈ ಒಪ್ಪಂದದ ಉದ್ದೇಶವಾಗಿದೆ. ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಅಭಿವೃದ್ಧಿ

ಮುಂತಾದ ಕ್ಷೇತ್ರಗಳಲ್ಲಿ ಸಂಯುಕ್ತ ಕಾರ್ಯಾಚರಣೆಗೆ ಇದು ಅವಕಾಶ ಮಾಡಿಕೊಡುತ್ತದೆ. ಅಂತೆಯೇ ಪರಸ್ಪರರಿಗೆ ಗಂಡಾಂತರ ಒದಗಿದಾಗ ವಿಚಾರ ವಿನಿಮಯ ಮಾಡಲೂ ಅನುವುಮಾಡಿಕೊಟ್ಟಿದೆ. ಎಂದ ಮಾತ್ರಕ್ಕೆ ಇದನ್ನು ಮಿಲಿಟರಿ ಒಪ್ಪಂದವೆಂದು ಕರೆಯಲು ಬರುವುದಿಲ್ಲ. ಮತ್ತು ಈ ಬಗ್ಗೆ ಭಾರತದ ನೀತಿ ಸ್ಪಷ್ಟವಿದೆ. ಶಾಂತಿ, ಸಹಕಾರ, ಸಹಬಾಳ್ವೆಯ ತತ್ವಗಳನ್ನು ಮಾನ್ಯಮಾಡುವ ಯಾವದೇ ರಾಷ್ಟ್ರದೊಡನೆ ಸದ್ಭಾವನೆಯಿಂದ ಕೂಡಿದ ಯಾವದೇ ಒಪ್ಪಂದಮಾಡಿಕೊಳ್ಳಲು ಭಾರತ ಸಿದ್ಧವಿದೆಯೆಂದು ಪದೇ ಪದೇ ಸಾರಲಾಗಿದೆ.

ಇಂತಹ ಒಪ್ಪಂದಗಳಿಗೆ ಅಂಕಿತ ಹಾಕುವುದರ ಮೂಲಕ ಭಾರತವು ತನ್ನ ಅಲಿಪ್ತ ನೀತಿಯಿಂದ ದೂರ ಸರಿಯುತ್ತಿದೆ ಎಂಬುದು ಇನ್ನೊಂದು ಟೀಕೆಯಾಗಿದೆ. ಇದು ಸಹ ತಪ್ಪು ಗ್ರಹಿಕೆಯಾಗಿದೆ. ೧೯೪೭ ರಲ್ಲಿ ನಮ್ಮ ದೇಶ ಸ್ವತಂತ್ರವಾದಾಗ ದಿ. ಪ್ರಧಾನಿ ಜವಹರಲಾಲರು ಅಲಿಪ್ತ ನೀತಿಯನ್ನು ರೂಪಿಸಿ ಕಾರ್ಯಾಚರಣೆಗೆ ತಂದರು. ಅಂದಿನ ಪರಿಸ್ಥಿತಿಯಲ್ಲಿ ಭಾರತಕ್ಕೆ ಇಂತಹ ವಿದೇಶಾಂಗ ನೀತಿಯೇ ತಾರಕವೆಂದು ಅವರು ಭಾವಿಸಿದ್ದರು. ಅಲಿಪ್ತ ನೀತಿಯು ಅಂದಿನಿಂದ ಇಂದಿನ ವರೆಗೂ ನಮ್ಮ ವಿದೇಶಾಂಗ ನೀತಿಯ ಆಧಾರವಾಗಿದೆ. ಇಂದಿನ ಬದಲಾದ ಪರಿಸ್ಥಿತಿಯಲ್ಲಿ ಅದರ ಕಾರ್ಯಾಚರಣೆ ಮತ್ತು ಅರ್ಥನಿರೂಪಣೆಯಲ್ಲಿ ಬದಲಾವಣೆಯಾಗುವುದು ಸಹಜವಿದೆ. ಅದಕ್ಕೆ ತಕ್ಕಂತೆ ಆಗಬೇಕಾದ ಮಾರ್ಪಾಡುಗಳನ್ನು ಗುರುತಿಸಬೇಕು. ಆದರೆ

ನಮ್ಮ ನೀತಿ ಮೂಲತಃ ಅಲಿಪ್ತ ನೀತಿಯಾಗಿದೆ. ಅಲಿಪ್ತ ನೀತಿಯೆಂದರೆ ನಮ್ಮ ಸುತ್ತ ಜರುಗುವ ಘಟನೆಗಳಿಗೆ ಲಕ್ಷ್ಯಕೊಡಬಾರದು. ಅವುಗಳ ಗೋಜಿಗೆ ಹೋಗಬಾರದು ಅರ್ಥಾತ್ ನಮ್ಮ ಹಿತಾಸಕ್ತಿಗಳನ್ನು ಕಡೆಗಣಿಸಿ ನಿರಾಸಕ್ತರಾಗಿರಬೇಕೆಂದಲ್ಲ. ಕ್ರಿಯಾತ್ಮಕ ಅಲಿಪ್ತತೆ ನೆಹರೂರವರ ನೀತಿಯ ನೆಲೆಯಾಗಿತ್ತು. ಈ ನೀತಿಯ ಕ್ರಿಯಾತ್ಮಕತೆಯೇ ಭಾರತ ಮತ್ತು ಯಾವುದೇ ರಾಷ್ಟ್ರಗಳ ನಡುವಣ ಸಂಬಂಧಗಳನ್ನು ರೂಪಿಸುತ್ತಿದೆ. ಅಂತೆಯೇ ಬಂಗ್ಲಾದೇಶದೊಡನೆ ಅಥವಾ ಸೋವಿಯತ್ ರಷ್ಯದೊಡನೆ ಮಾಡಿಕೊಂಡ ಒಪ್ಪಂದಗಳು ನಮ್ಮ ವಿದೇಶಾಂಗ ನೀತಿಗೆ ಅನುಗುಣವಾಗಿಯೇ ಇವೆ. ಈ ಒಪ್ಪಂದಗಳು ಭಾರತದ ವಿದೇಶಾಂಗ ನೀತಿಯ ಧ್ಯೇಯ ಮತ್ತು ಆದರ್ಶಗಳನ್ನು ಮಾನ್ಯಮಾಡಿವೆ. ಎಂದ ಮೇಲೆ ಭಾರತದ ಆದರ್ಶಗಳು ಸತ್ವಯುತವಾಗಿವೆ ಮತ್ತು ಇದರಿಂದ ನಮ್ಮ ನೀತಿಗೆ ಜಯ ದೊರೆತಂತಾಗಿದೆ. ಈ ಒಪ್ಪಂದಕ್ಕೆ ಅಂಕಿತ ಹಾಕಿದ ದಿನವೇ ಹೊರಡಿಸಲಾದ ಸಂಯುಕ್ತ ಪ್ರಕಟಣೆಯಲ್ಲಿ ಪ್ರಧಾನಿಗಳಾದ ಇಂದಿರಾಗಾಂಧಿ ಮತ್ತು ಮುಜಿಬುರ್‌ರಹಮಾನರು ಒಪ್ಪಂದದ ವಿವಿಧ ಅಂಶಗಳನ್ನು ಪುಷ್ಟೀಕರಿಸುತ್ತಾ ಈ ಒಪ್ಪಂದವು ಭಾರತ ಮತ್ತು ಬಂಗ್ಲಾದೇಶಗಳ ನಡುವೆ ಸುಮಧುರ ಮತ್ತು ಶಾಶ್ವತ ಬಾಂಧವ್ಯವನ್ನು ನಿರ್ಮಿಸುವಲ್ಲಿ ಸಹಕಾರಿ ಯಾಗುವುದೆಂದು ಹೇಳಿರುವುದು ಯಥಾರ್ಥವಾಗಿದೆ. ಈ ಒಪ್ಪಂದದನ್ವಯ ಈಗಾಗಲೇ ಭಾರತ ಮತ್ತು ಬಂಗ್ಲಾಗಳ ನಡುವೆ ಉನ್ನತ ಮಟ್ಟದಲ್ಲಿ ಮತ್ತು ಅಧಿಕಾರಿಗಳ ಮಟ್ಟದಲ್ಲಿ

ಅನೇಕ ಸಭೆಗಳು ಜರುಗಿದ್ದು ಕೆಲವು ಪ್ರಮುಖ ನಿರ್ಣಯಗಳನು ಮಾಡಲಾಗಿದೆ.

ನವೋದಿತ ಬಂಗ್ಲಾದೇಶದ ಬಗೆಗೆ ಇತ್ತೀಚಿನ ಇನ್ನೊಂದು ಘಟನೆಯೆಂದರೆ ಅಮೇರಿಕವು ತನ್ನ ಡೋಲಾಯಮಾನ ಭಾವನೆಯನ್ನು ತೊರೆದು ಕೊನೆಗೂ ಬಂಗ್ಲಾದೇಶಕ್ಕೆ ಮನ್ನಣೆಯನ್ನಿತ್ತದ್ದು. ಬಂಗ್ಲಾದೇಶದ ಉದಯದ ಬಗೆಗೆ ಪಾಕಿಸ್ತಾನದ ನೀತಿಗೆ ಪುಷ್ಟಿ ಕೊಡುತ್ತಿದ್ದ ಅಮೇರಿಕವು ಕೊನೆಗೂ ವಾಸ್ತವಿಕತೆಯನ್ನು ಒಪ್ಪಿಕೊಳ್ಳಲೇಬೇಕಾಯಿತು. ಅಂತೆಯೇ ಆ ದೇಶವು ನವೋದಿತ ಬಂಗ್ಲಾ ದೇಶಕ್ಕೆ ತನ್ನ ಮನ್ನಣೆಯನ್ನು ಸಾರಿತು. ಸಕಾಲದಲ್ಲಿ ಮನ್ನಣಯನ್ನಿತ್ತಿದ್ದರೆ ಚೆನ್ನಾಗಿತ್ತು. ಅಮೇರಿಕೆಯ ಮನ್ನಣೆಯಿಂದಾಗಿ ಚೀನಾವನ್ನು ಹೊರತು ಜಗತ್ತಿನ ಇತರ ಪ್ರಮುಖ ರಾಷ್ಟ್ರಗಳೆಲ್ಲವೂ ನವೋದಿತ ಬಂಗ್ಲಾದೇಶವನ್ನು ಮಾನ್ಯ ಮಾಡಿದಂತಾಯಿತು.

ಕೊನೆಯದಾಗಿ. ಭಾರತ ಬಂಗ್ಲಾದೇಶಗಳ ನಡುವೆ ಬೆಳೆಯುತ್ತಿರುವ ನಿಕಟ ಸಂಬಂಧವು ಭಾರತ–ಪಾಕಿಸ್ತಾನಗಳ ಸಂಬಂಧಗಳ ಮೇಲೆ ಯಾವ ಪರಿಣಾಮವನ್ನುಂಟುಮಾಡುವುದೆಂಬುದನ್ನು ತಿಳಿಯಬೇಕಾಗಿದೆ. ನಮಗೆ ಬಂಗ್ಲಾದೇಶ ಎಷ್ಟು ನಿಕಟವೋ ಅಷ್ಟೇ ನಿಕಟವಾದ ಭೌಗೋಲಿಕ ಸಾಮೀಪ್ಯವನ್ನು ಪಾಕಿಸ್ತಾನದೊಂದಿಗೆ ಹೊಂದಿದ್ದೇವೆ. ಆದರೂ ಪಾಕಿಸ್ತಾನವು ಮೊದಲಿನಿಂದಲೂ ದ್ವೇಷ ವಾತಾವರಣವನ್ನು ನಿರ್ಮಿಸುತ್ತಿದೆ. ಮತ್ತು ಇದುವರೆಗೆ

ನಾಲ್ಕು ಬಾರಿ ಭಾರತದ ಮೇಲೆ ಅಪ್ರಚೋದಿತ ಸಶಸ್ತ್ರ ಆಕ್ರಮಣ ನಡೆಸಿದೆ. ಭಾರತದಲ್ಲಿ ಇಂದು ಬಂಗ್ಲಾದೇಶದಲ್ಲಿ ಶರಣಾಗತರಾದ ೯೦,೦೦೦ ಯುದ್ಧ ಬಂದಿಗಳಿದ್ದಾರೆ. ಇವರನ್ನು ವಾಪಸುಮಾಡಬೇಕೆಂದು ಪಾಕಿಸ್ತಾನ ಭಾರತಕ್ಕೆ ತಿಳಿಸುತ್ತಿದೆ. ಆದರೆ ಈ ಸಮಸ್ಯೆಯೊಂದೇ ಪ್ರಮುಖವಾಗಿಲ್ಲ. ಕಾಶ್ಮೀರದ ಸಮಸ್ಯೆಯಿಂದ ಯುದ್ಧ ಕೈದಿಗಳ ವಾಪಸಾತಿಯವರೆಗೆ ಅನೇಕ ಸಮಸ್ಯೆಗಳಿವೆ. ಯುದ್ಧಕೈದಿಗಳ ವಾಪಸಾತಿಯನ್ನು ಭಾರತವು ಏಕಪಕ್ಷೀಯವಾಗಿ ಮಾಡಲಾರದು. ಏಕೆಂದರೆ, ಬಂಗ್ಲಾದೇಶದಲ್ಲಿಈ ಕೈದಿಗಳು ಭಾರತ ಮತ್ತು ಬಂಗ್ಲಾದೇಶಗಳ ಸಂಯುಕ್ತ ಸೇನಾಧಿಪತ್ಯಕ್ಕೆ ಶರಣಾಗತರಾಗಿರುತ್ತಾರೆ. ಆದ್ದರಿಂದ ಈ ವಿಷಯದಲ್ಲಿ ಬಂಗ್ಲಾದೇಶವೂ ಮಾತುಕತೆಗಳಲ್ಲಿ ಭಾಗವಹಿಸಬೇಕಾಗುತ್ತದೆ.

ಯುದ್ಧ ಕೈದಿಗಳ ವಿನಿಮಯಕ್ಕೆ ಸಂಬಂಧವಾದ ಇನ್ನೊಂದು ವಿಷಯವೆಂದರೆ ಬಂಗ್ಲಾದೇಶದಲ್ಲಿ ನರಮೇಧವನ್ನು ಅವ್ಯಾಹತವಾಗಿ ನಡೆಸಿ ಮೂವತ್ತು ಲಕ್ಷ ನಿರಪರಾಧಿಗಳನ್ನು ಕೊಲ್ಲುವುದರಲ್ಲಿ ನಿರತರಾಗಿದ್ದವರನ್ನು ಯುದ್ಧ ಅಪರಾಧಿಗಳೆಂದು ನ್ಯಾಯಾಂಗ ವಿಚಾರಣೆಗೆ ಗುರಿಪಡಿಸುವುದು. ಈ ಎರಡೂ ವಿಷಯಗಳನ್ನು ಪರಿಶೀಲಿಸುವ ಯಾವುದೇ ಸಭೆಯಲ್ಲಿ ಭಾರತದೊಡನೆ ಬಂಗ್ಲಾದೇಶವೂ ಭಾಗವಹಿಸುವುದು ಅನಿವಾರ್ಯ. ಭಾರತವೂ ಈ ಧೋರಣೆಯನ್ನು ತಳೆದಿದೆ. ಬಂಗ್ಲಾದೇಶದ ನಿಲುವೂ ಇದೇ ಆಗಿದೆ. ಆದರೆ ಪಾಕಿಸ್ತಾನ ಇದಕ್ಕೆ ಒಪ್ಪುತ್ತಿಲ್ಲ. ಇದುವರೆಗೆ ಪಾಕಿಸ್ತಾನವು ಬಂಗ್ಲಾದೇಶಕ್ಕೆ ಮನ್ನಣೆಯನ್ನಿತ್ತಿಲ್ಲ. ಮನ್ನಣೆ

ಮುನ್ನೀಯುವವರೆಗೆ ಬಂಗ್ಲಾದೇಶದೊಡನೆ ಪಾಕಿಸ್ತಾನ ವ್ಯವಹರಿಸಲು ಬರುವುದಿಲ್ಲ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಇತ್ತೀಚೆಗೆ ರಾವಳಪಿಂಡಿ ಮತ್ತು ಮರ್ರಿಯಲ್ಲಿ ಭಾರತ ಮತ್ತು ಪಾಕಿಸ್ತಾನಗಳ ನಡುವೆ ಜರುಗಿದ ವಿಶೇಷ ಪ್ರತಿನಿಧಿಗಳ ಮಟ್ಟದ ಸಭೆಯಲ್ಲಿ ಹಲವು ವಿಷಯಗಳು ಪ್ರಸ್ತಾಪಿಸಲ್ಪಟ್ಟಿದ್ದು ೧೯೭೨ರ ಜೂನ ತಿಂಗಳಲ್ಲಿ ಭಾರತದ ಪ್ರಧಾನಿ ಮತ್ತು ಪಾಕಿಸ್ತಾನದ ಅಧ್ಯಕ್ಷರ ನಡುವೆ ದಿಲ್ಲಿಯಲ್ಲಿ ಶೃಂಗಸಭೆ ಸೇರಬೇಕೆಂದು ಒಪ್ಪಿಕೊಳ್ಳಲಾಗಿದೆ. ಈ ಸಭೆಯು ಯಶಸ್ಸನ್ನು ಕಾದು ನೋಡಬೇಕಾಗಿದೆ.

ಇಂದು ಬಂಗ್ಲಾದೇಶದಲ್ಲಿ ಅನೇಕ 'ಬಿಹಾರಿ ಮುಸ್ಲಿಮ'ರು ಇದ್ದು ಪಾಕಿಸ್ತಾನದಲ್ಲಿ ಸುಮಾರು ಏಳು ಲಕ್ಷ ಬಂಗಾಲಿಗಳು ಇದ್ದಾರೆ. ಪಾಕಿಸ್ತಾನ ಸರಕಾರವು ಬಂಗ್ಲಾದೇಶದಲ್ಲಿ ಬಿಹಾರಿ ಮುಸ್ಲಿಮರನ್ನು ಹಿಂಸಿಸಲಾಗುತ್ತಿದೆ ಎಂದು ಆಪಾದಿಸಿದ್ದರೆ, ಬಂಗಾಲಿಗಳನ್ನು ಪಾಕಿಸ್ತಾನವು ಹಿಂಸೆಗೆ ಗುರಿಮಾಡಿದೆ ಎಂಬ ಮರು ಆಪಾದನೆಯಿದೆ. ಬಿಹಾರಿ ಮುಸ್ಲಿಮರು ಭಾರತ ಇಬ್ಭಾಗವಾಗಿ ಪಾಕಿಸ್ತಾನ ನಿರ್ಮಾಣವಾದಾಗ ಪೂರ್ವಪಾಕಿಸ್ತಾನಕ್ಕೆ ತಮ್ಮ ಇಚ್ಛೆಯಂತೆ ಹೋದವರು. ಅವರು ಇತ್ತೀಚೆಗೆ ಅಲ್ಲಿ ಜರುಗಿದ ಹತ್ಯಾಕಾಂಡದಲ್ಲಿ ಯಾಹ್ಯಾರ ಹಸ್ತಕರಾಗಿದ್ದರಲ್ಲದೆ ಅನೇಕ ಪ್ರಮುಖ ವ್ಯಕ್ತಿಗಳ ಕೊಲೆಗೆ ಕಾರಣರಾದವರು ಅವರಲ್ಲಿ ಅನೇಕರು ಬಂಗ್ಲಾದೇಶಕ್ಕೆ ನಿಷ್ಠೆ ತೋರಲು ಸಿದ್ಧರಿರುವಂತೆ ತೋರುವುದಿಲ್ಲ. ಬಂಗ್ಲಾ ಪ್ರಧಾನಿಯವರು ಇವರು ನಿಷ್ಠಾವಂತ ಪ್ರಜೆಗಳಾಗಿ ಉಳಿಯುವುದಾದರೆ ಅವರಿಗೆ ಸಮಾನ ಸೌಲಭ್ಯಗಳನ್ನು ಕೊಡುವುದಾಗಿ

ಸ್ತಾನಿ ತಮ್ಮ ಸಂಯಮ ಮತ್ತು ಔದಾರ್ಯವನ್ನು ಪ್ರದರ್ಶಿಸಿದ್ದಾರೆ. ಇಲ್ಲವಾದರೆ ಅವರು ಪಾಕಿಸ್ತಾನಕ್ಕೆ ಹೋಗಬಹುದೆಂದೂ ಹೇಳಿದ್ದಾರೆ. ಭಾರತವಂತೂ ಅವರನ್ನು ಮರಳಿ ಪಡೆಯುವ ಪ್ರಶ್ನೆಯೇ ಇಲ್ಲ. ಇದೇ ರೀತಿ ಪಾಕಿಸ್ತಾನದಲ್ಲಿರುವ ಬಂಗಾಲಿಗಳು ಅಲ್ಲಿಯೇ ಉಳಿಯುವುದೂ ಸಾಧ್ಯವಿಲ್ಲ. ಅವರಿಗೆ ಬಂಗ್ಲಾದೇಶಕ್ಕೆ ಮರಳಿ ಹೋಗಲು ಅವಕಾಶ ಕೊಡಬೇಕು. ಈ ಎಲ್ಲಾ ವಿಷಯಗಳನ್ನು ಸೌಹಾರ್ದಯುತವಾಗಿ ಬಗೆ ಹರಿಸಿಕೊಳ್ಳಲು ಈ ಉಪಖಂಡದ ಮೂರು ರಾಷ್ಟ್ರಗಳೂ-ಭಾರತ, ಬಂಗ್ಲಾದೇಶ, ಪಾಕಿಸ್ತಾನ-ಮಾತು ಕತೆಗಳಿಗಾಗಿ ಒಂದುಕಡೆ ಸೇರುವುದು ಅನಿವಾರ್ಯ. ಭಾರತವು ಈ ಸಲಹೆಯನ್ನು ಮಾಡುತ್ತಲೇ ಬಂದಿದೆ. ಪಾಕಿಸ್ತಾನದ ಭುಟ್ಟೋರವರು ಈ ಗಂಭೀರ ಪರಿಸ್ಥಿತಿಯನ್ನು ಸರಿಯಾಗಿ ಅರ್ಥಮಾಡಿಕೊಂಡು ವಾಸ್ತವಿಕತೆಗನುಗುಣವಾಗಿ ಬಂಗ್ಲಾದೇಶಕ್ಕೆ ಮನ್ನಣೆಯನ್ನಿತ್ತು ಇಂತಹ ತ್ರಿ-ರಾಷ್ಟ್ರ ಶೃಂಗ ಸಭೆಗೆ ಅನುವು ಮಾಡುವರೆಂದು ಆಶಿಸಬಹುದೇ ? ಇಲ್ಲವಾದರೆ ಭಾರತದ ಉಪಖಂಡದಲ್ಲಿ ಶಾಶ್ವತ ಶಾಂತಿಯು ನೆಲಸುವುದು ದುಸಾಧ್ಯ. ಅದೇ ರೀತಿ ಭಾರತ-ಪಾಕಿಸ್ತಾನಗಳ ಸಂಬಂಧಗಳು ಸುಧಾರಿಸುವುದೂ ಸಾಧ್ಯವಿಲ್ಲ. ಬಂಗ್ಲಾದೇಶವನ್ನು ಹೊರಗಿಟ್ಟು ನಡೆಸಲಾಗುವ ಯಾವದೇ ಮಾತುಕತೆಗಳು ಸಮಸ್ಯೆಯ ಪರಿಹಾರವನ್ನೊದಗಿಸಲು ಸಾಧ್ಯವಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ, ಅಂತೂ ನವೋದಿತ ಬಂಗ್ಲಾದೇಶವು ತಾನು ಯಾವ ಆದರ್ಶಗಳಿಗಾಗಿ ಹೋರಾಡಿತೋ ಅಂತಹ ಅತ್ಯಮೂಲ್ಯ ಆದರ್ಶಗಳನ್ನೇ ತನ್ನ

ಆಂತರಿಕ ಮತ್ತು ವಿದೇಶಾಂಗ ನೀತಿಯು ತಳಹದಿಯನ್ನಾ
ಕೊಂಡು ಅವುಗಳನ್ನು ಪಾಲಿಸುತ್ತ ಬರುತ್ತಿರುವುದು ಸ್ವಾಗತಾ
ವಾಗಿದೆ.

# ಉಪನ್ಯಾಸ ಗ್ರಂಥಮಾಲೆ

## ಇತ್ತೀಚಿನ ಪ್ರಕಟನೆಗಳು

೧ ಸಂಸ್ಕೃತಸಾಹಿತ್ಯದಲ್ಲಿ ಹಾಸ್ಯ —ಎಲ್. ಜಿ. ಜೋಶಿ

೨ ಕಾರ್ಮಿಕ ಮತ್ತು ಯೋಜನೆ —ಟಿ. ಕೆ. ಮೇಟಿ

೩ ಭಾರತೀಯ ಹಬ್ಬಗಳು —ಸಿ. ವಿ. ಕೆರಿಮನಿ

೪ ಸಿಮೆಂಟ್ ಕಾಂಕ್ರೀಟ್ —ಬಸವರಾಜ ಪುರಾಣಿಕ

೫ ಜನಪದ ಕಾವ್ಯ —ಗಿರಡ್ಡಿ ಗೋವಿಂದರಾಜ

೬ ಶ್ರೀ ಅರವಿಂದರ ಮಹಾಕಾವ್ಯ 'ಸಾವಿತ್ರಿ' —ಪಿ. ಬಿ. ನರೇಗಲ್ಲ

೭ ಧರ್ಮ–ಸಂಸ್ಕೃತಿ–ಸಮಾಜ —ಎನ್. ಕೆ. ಕಡೆತೋಟದ

೮ ಬಸವಣ್ಣನವರು ಕಟ್ಟಬಯಸಿದ ಸಮಾಜ —ಸಂಗಣ್ಣ ಕುಪ್ಪಸ್ತ

೯ ಕುಮಾರವ್ಯಾಸನ ಭಾಗವತ ದೃಷ್ಟಿ —ಎ. ಆರ್. ಬುರ್ಲಿ

೧೦ ಹರಿಹರನ ಮೂರು ರಗಳೆಗಳು —ಎಂ. ಎಸ್ ಲಠ್ಠೆ

೧೧ ಪ್ರಾಚ್ಯವಸ್ತು ಸಂಶೋಧನೆ —ಅ. ಸುಂದರ

---

ವ್ಯಾಸಂಗ ವಿಸ್ತರಣ ಹಾಗು ಪ್ರಕಟನವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಮಹಾಂತ ಮುದ್ರಣಾಲಯ ಧಾರವಾಡ–೬